KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ ನವೆಂಬರ್ ೨೦, ೨೦೦೮ (ಕಾರ್ತೀಕ ೨೯, ಶಕ ವರ್ಷ ೧೯೩೦) | ಸಂಚಿಕೆ ೪೬ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ತಮ್ಮಣ್ಣ, ಡಿವೈ.ಎಸ್.ಪಿ, ಎಫ್.ಪಿ.ಬಿ ಮತ್ತು ಶ್ರೀ ಹರಿಶ್ಚಂದ್ರ ಹೆಜ್‌ಮಾಡಿ, ಪಿ.ಐ. ಪಶ್ಚಿಮ ವಲಯ, ಮಂಗಳೂರು ಇವರ ವಿರುದ್ಧದ ಇಲಾಖಾ ವಿಚಾರಣೆಯ ಅಂತಿಮ ಆದೇಶ.

**ಓದಲಾಗಿದೆ:**
1. ಡಿಜಿ ಮತ್ತು ಐಜಿಪಿ ರವರ ಪತ್ರದ ಸಂಖ್ಯೆ:ಸಿಬಿ(5)31/2005–06 ದಿನಾಂಕ 21–12–2005.
2. ಸರ್ಕಾರದ ಆದೇಶ ಸಂಖ್ಯೆ: ಒಇ 33 ಪೊಸಿಪ 2006 ದಿನಾಂಕ 28–06–2006.
3. ಡಿಜಿ ಮತ್ತು ಐಜಿಪಿ ರವರ ಪತ್ರದ ಸಂಖ್ಯೆ: ಸಿಬಿ(5)31/2005–06 ದಿನಾಂಕ 11–02–2008.

**ಪ್ರಸ್ತಾವನೆ:**

ಶ್ರೀ ತಮ್ಮಣ್ಣ, ಪೊಲೀಸ್ ಉಪಾಧೀಕ್ಷಕರು, ಎಫ್.ಪಿ.ಬಿ ಪಶ್ಚಿಮ ವಲಯ, ಮಂಗಳೂರು ಮತ್ತು ಶ್ರೀ ಹರಿಶ್ಚಂದ್ರ ಹೆಜ್‌ಮಾಡಿ, ಪೊಲೀಸ್ ಇನ್ಸ್‌ಪೆಕ್ಟರ್ ಎಫ್.ಪಿ.ಬಿ ಪಶ್ಚಿಮ ವಲಯ, ಮಂಗಳೂರು ಇವರುಗಳಿಗೆ ಕಾರ್ಕಳದ ಮೂರನೇ ಅಡಿಷನಲ್ ಸಿವಿಲ್ ಜಡ್ಜ್ ಹಾಗೂ ಜೆ.ಎಂ.ಎಫ್.ಸಿ ನ್ಯಾಯಾಲಯದ ಓ.ಎಸ್.ಸಂ: 46/96 ರಲ್ಲಿ ವಿವಾದಾತ್ಮಕ ಮತ್ತು ಅಂಗೀಕೃತ ಎಡಗೈ ಬೆರಳು ಮುದ್ರೆಗಳ ಬಗ್ಗೆ ತಜ್ಞರ ಅಭಿಪ್ರಾಯವನ್ನು ನಿರೂಪಿಸಲು ಸೂಚಿಸಿ ಪೊಲೀಸ್ ಅಧೀಕ್ಷಕರು, ಬೆರಳು ಮುದ್ರೆ ಘಟಕ, ಬೆಂಗಳೂರು ಇವರು ಹಂಚಿಕೆ ಮಾಡಿದ್ದು, ಬೆರಳು ಮುದ್ರೆ ತಜ್ಞರಾಗಿದ್ದು, ಸದರಿ ಮುದ್ರೆಗಳನ್ನು ಸರಿಯಾಗಿ ಪರೀಕ್ಷಿಸದೇ ದೋಷಪೂರಿತ ಅಭಿಪ್ರಾಯವನ್ನು ನೀಡಿ ಕರ್ತವ್ಯದಲ್ಲಿ ಲೋಪವೆಸಗಿದ್ದಾರೆಂದು ತೀರ್ಮಾನಿಸಿ ಸದರಿ ಅಧಿಕಾರಿಗಳ ವಿರುದ್ಧ ಕೆ.ಎಸ್.ಪಿ (ಡಿ.ಪಿ) ನಿಯಮ 1965/89ರ ನಿಯಮ 6 ಉಪ ನಿಯಮ (2) ಮತ್ತು 8ರ ಪ್ರಕಾರ ಜಂಟಿ ಇಲಾಖಾ ವಿಚಾರಣೆ ನಡೆಸಲು ಓದಲಾದ (1)ರ ಪತ್ರದಲ್ಲಿ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ಇವರು ಸರ್ಕಾರವನ್ನು ಕೋರಿದ್ದರು. ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಇವರನ್ನು ವಿಶೇಷ ಅಧಿಕಾರಹೊಂದಿದ ಇಲಾಖಾ ವಿಚಾರಣಾಧಿಕಾರಿಗಳಾಗಿ ಓದಲಾದ (2) ಸರ್ಕಾರಿ ಆದೇಶದಲ್ಲಿ ನೇಮಿಸಲಾಗಿತ್ತು. ಸದರಿ ಆರೋಪಿತ ಪೊಲೀಸ್ ಅದಿಕಾರಿಗಳ ವಿರುದ್ಧ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

(i) ಶ್ರೀ ಹರಿಶ್ಚಂದ್ರ ಹೆಜಮಾಡಿ, ಪೊಲೀಸ್ ಇನ್ಸ್‌ಪೆಕ್ಟರ್ ಬೆರಳು ಮುದ್ರೆ ಘಟಕ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು: ಕಾರ್ಕಳದ ಮೂರನೇ ಅಡಿಷನಲ್ ಸಿವಿಲ್ ಜಡ್ಜ್ (ಕಿ.ಶ್ರೇ) ಹಾಗೂ ಜೆ.ಎಂ.ಎಫ್.ಸಿ ನ್ಯಾಯಾಲಯದ ಓ.ಎಸ್.ಸಂ:46/96 ರಲ್ಲಿ ವಿವಾದಾತ್ಮಕ ಮತ್ತು ಅಂಗೀಕೃತ ಎಡಗೈ ಬೆರಳು ಮುದ್ರೆಗಳ ಬಗ್ಗೆ ನಿಮ್ಮ ತಜ್ಞ ಅಭಿಪ್ರಾಯವನ್ನು ನಿರೂಪಿಸಲು ಸೂಚಿಸಿ ಪೊಲೀಸ್ ಅಧೀಕ್ಷಕರು, ಬೆರಳು ಮುದ್ರೆ ಸಂಗ್ರಹಾಲಯ, ಬೆಂಗಳೂರು ರವರು ಹಂಚಿಕೆ ಮಾಡಿರುತ್ತಾರೆ. ಬೆರಳುಮುದ್ರೆ ತಜ್ಞರಾದ ನೀವು ಸದರಿ

ಮುದ್ರೆಗಳನ್ನು ಸರಿಯಾಗಿ ಪರೀಕ್ಷಿಸದೆ "ವಿವಾದಾತ್ಮಕ ಮತ್ತು ಅಂಗೀಕೃತ ಎಡಗೈ ಬೆರಳು ಮುದ್ರೆಗಳು ಪರಸ್ಪರ (Identical) ತದ್ರೂಪದ್ದಾಗಿರುವುದನ್ನು ಹೋಲಿಕೆ ಆಗುವುದಿಲ್ಲ (Not identical) ಇವು ವಿವಿಧ ಮುದ್ರೆಗಳು"ಎಂಬ ದೋಷಪೂರಿತ ಅಭಿಪ್ರಾಯವನ್ನು ಬೆರಳು ಮುದ್ರೆ ಪರೀಕ್ಷೆ ಪ್ರಮಾಣ ಪತ್ರ ಸಂಖ್ಯೆ:3/ ಬೆಮುಘ/ದಕ/04 ಇದರಲ್ಲಿ ನೀಡಿ ನಿಮ್ಮ ಕರ್ತವ್ಯದಲ್ಲಿ ಲೋಪ ಎಸಗಿ ದುರ್ನಡತೆ ಪ್ರದರ್ಶಿಸಿರುತ್ತೀರಿ".

(ii) ಶ್ರೀ ತಮ್ಮಣ್ಣ, ಪೊಲೀಸ್ ಉಪಾಧೀಕ್ಷಕರು, ಪಶ್ಚಿಮವಲಯ, ಮಂಗಳೂರು:– ಪೊಲೀಸ್ ಇನ್ಸ್‌ಪೆಕ್ಟರ್, ಬೆರಳುಮುದ್ರೆ ಸಂಗ್ರಹಾಲಯ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ಮೇಲಾಧಿಕಾರಿಯಾಗಿದ್ದು, ಶ್ರೀ ಹರಿಶ್ಚಂದ್ರ ಹೆಜ್‌ಮಾಡಿ, ಪೊಲೀಸ್ ಇನ್ಸ್‌ಪೆಕ್ಟರ್, ಬೆರಳು ಮುದ್ರೆ ಸಂಗ್ರಹಾಲಯ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ಕಾರ್ಕಳದ 3ನೇ ಹೆಚ್ಚುವರಿ ಸಿವಿಲ್ ಜಡ್ಜ್ (ಕಿ.ಶ್ರೇ) ಹಾಗೂ ಜೆ.ಎಂ.ಎಫ್.ಸಿ. ನ್ಯಾಯಾಲಯದ ಓ.ಎಸ್.ಸಂ:46/96ರ ದಾಖಲಾತಿಗಳನ್ನು ಪರೀಕ್ಷಿಸಿ ಅವರು ಬೆರಳು ಮುದ್ರೆ ಪ್ರಮಾಣ ಪತ್ರ ಸಂಖ್ಯೆ:3/ ಬೆಮುಘ/ದಕ/04 ಇದರಲ್ಲಿ ತಪ್ಪು ಅಭಿಪ್ರಾಯ ನೀಡಿದ್ದು ಅದನ್ನು ಪರೀಕ್ಷಿಸಿರುವ ನೀವು ಅದರಲ್ಲಿರುವ ಘೋರವಾದ ತಪ್ಪನ್ನು ಕಂಡು ಹಿಡಿದು ಸರಿಪಡಿಸದೆ ಶ್ರೀ ಹರಿಶ್ಚಂದ್ರ ಹೆಜ್‌ಮಾಡಿ ಇವರು ನೀಡಿರುವ ತಪ್ಪು ಅಭಿಪ್ರಾಯವನ್ನೇ ಧೃಢೀಕರಿಸಿ ಪೊಲೀಸ್ ಅಧೀಕ್ಷಕರು ಬೆರಳು ಮುದ್ರೆ ಸಂಗ್ರಹಾಲಯ, ಬೆಂಗಳೂರು ರವರಿಗೆ ಸಲ್ಲಿಸಿ ಕರ್ತವ್ಯಚ್ಯುತಿ ಎಸಗಿ ದುರ್ನಡತೆ ಪ್ರದರ್ಶಿಸಿರುತ್ತೀರಿ".

ವಿಚಾರಣಾಧಿಕಾರಿಗಳು ವಿಚಾರಣೆ ಸಂದರ್ಭದಲ್ಲಿ ಒಟ್ಟು 03 ಜನ ಅಭಿಯೋಗ ಪರ ಸಾಕ್ಷಿಗಳನ್ನು 16 ಅಭಿಯೋಗ ಪರ ದಾಖಲೆಗಳನ್ನು 02 ರಕ್ಷಣಾ ಪರ ಸಾಕ್ಷಿ ಹಾಗೂ 15 ಪ್ರತಿರಕ್ಷಣಾ ದಾಖಲೆಗಳನ್ನು ಪರಿಶೀಲಿಸಿದ್ದಾರೆ.

ಆರೋಪಿತ ಪೊಲೀಸ್ ಅಧಿಕಾರಿ–1 ರವರು ಒಂದು ಪೇಪರ್ ಶೀಟಿನಲ್ಲಿ ಗ್ರೌಂಡ್ಸ್ ಫಾರ್ ಒಪಿನಿಯನ್ (ಇಎಕ್ಸ್ ಡಿ–2) ರಲ್ಲಿ ಬರೆದಿದ್ದು, ಅ.ಸಾಕ್ಷಿ–2 ರವರು The ridge Characterstic that are found in the disputed left Thumb Impression marked as `D1` are not available in their relative sequence in the admitted left Thumb Impression marked as A1` ಎಂದು ತಮ್ಮ ಹಸ್ತಾಕ್ಷರದಿಂದ ಒಂದು ಕರೆಕ್ಷನ್ ಮಾಡಿದ್ದು ಈ ಕರೆಕ್ಷನ್ ರೀತಿಯಲ್ಲಿಯೇ ಆ.ಪೊ.ಅ–1 ರವರು ಗ್ರೌಂಡ್ಸ್ ಫಾರ್ ಒಪಿನಿಯನ್ (ಇಎಕ್ಸ್‌ಪಿ–6)ನ್ನು ತಮ್ಮ ಮೇಲಾಧಿಕಾರಿಗಳಿಗೆ ಸಲ್ಲಿಸಿಕೊಂಡಿರುತ್ತಾರೆ. ಅ.ಸಾಕ್ಷಿ–2 ಇವರು ವಿಚಾರಣಾ ಸಮಯದಲ್ಲಿ ತಮ್ಮ ಪಾಟೀ ಸವಾಲಿನಲ್ಲಿ ನಾನು ಆ.ಪೊ.ಅ–1 ರವರ ಅಭಿಪ್ರಾಯದ ಮೇಲೆನೆ ನಾನು ಯಾವ ತರಹ ಬರೆಯಬೇಕು, ಅಷ್ಟಕ್ಕೆ ಸೀಮಿತವಾಗಿ ಬರೆದಿರುತ್ತೇನೆ ಆದರೆ ಅದು ನನ್ನ ಅಭಿಪ್ರಾಯ ಎಂದು ಹೇಳುವುದು ಸರಿಯಲ್ಲ ಎಂದು ತಿಳಿಸಿರುತ್ತಾರೆ. ಅಲ್ಲದೆ ಆ.ಪೊ.ಅ–1 ರವರು ತಮ್ಮ ಅಂತಿಮ ಹೇಳಿಕೆಯಲ್ಲಿ Annexure-5 ರಿಂದ Annexure-10 ರ ವರೆಗೆ ದಾಖಲಾತಿಗಳನ್ನು ಲಗತ್ತಿಸಿದ್ದು ಅದರಲ್ಲಿ ಅ.ಸಾಕ್ಷಿ 2 ರವರು ಫೋಟಸೇಫ್ ಮಾಡಿರುವ ಪ್ರಮಾಣ ಪತ್ರಗಳಿದ್ದು, ಈ ಹಿಂದೆ ಎಲ್ಲಾ ಪ್ರಕರಣಗಳಲ್ಲಿ ಅ.ಸಾ–2 ರವರೇ ಪ್ರಮಾಣ ಪತ್ರಗಳನ್ನು ಪರಿಶೀಲಿಸಿ ತಪ್ಪುಗಳನ್ನು ತಿಳಿಸುತ್ತಿದ್ದು, ಈ ಪ್ರಕರಣದಲ್ಲಿಯೂ ಕೂಡ ಅವರು ಆರೋಪಿತ ಪೊಲೀಸ್ ಅಧಿಕಾರಿ–1 ನೀಡಿರುವ ಅಭಿಪ್ರಾಯಕ್ಕೆ ತಿದ್ದುಪಡಿ ಮಾಡಿದ್ದು ಆಗ Not Identical ಎಂದು ಅಭಿಪ್ರಾಯವನ್ನು ನೀಡಿದ್ದು, ಆ ಸಮಯದಲ್ಲಿ ಅವರು ಮಾಡಿರುವ ತಪ್ಪುಗಳನ್ನು ತಿದ್ದಿ ತಿಳಿಸಬಹುದಾಗಿತ್ತು. ಆದರೆ ಆ.ಸಾ – 2 ರವರು ನಂತರದಲ್ಲಿ Identical ಎಂದು ಅಭಿಪ್ರಾಯ ನೀಡಿದ್ದು, ಆರೋಪಿತ ಪೊಲೀಸ್ ಅಧಿಕಾರಿ ರವರು ಮತ್ತು ಅ.ಸಾ–2 ರವರು ಮೊದಲು ನೀಡಿರುವ ಅಭಿಪ್ರಾಯವೇ ಸರಿಯಾಗಿರುವುದಾಗಿ ಕಂಡು ಬರುತ್ತದೆ ಎಂದು ವಿಚಾರಣಾಧಿಕಾರಿಗಳು ಅಭಿಪ್ರಾಯಪಟ್ಟಿದ್ದಾರೆ.

ಆರೋಪಿತ ಪೊಲೀಸ್ ಅಧಿಕಾರಿ–1 ರವರು ತಾವು ನೀಡಿರುವ ಅಭಿಪ್ರಾಯವನ್ನು ದೃಢಪಡಿಸಿಕೊಳ್ಳುವ ಸಲುವಾಗಿ ಪೊಲೀಸ್ ಅಧೀಕ್ಷಕರು, ತಮಿಳುನಾಡು ಫಿಂಗರ್ ಪ್ರಿಂಟ್ ಬ್ಯೂರೋ, ಚನ್ನೈ ಇವರ ಅಭಿಪ್ರಾಯ (ಇಎಕ್ಸ್‌ಡಿ –11) ಡೈರೆಕ್ಟರ್, ಫೊರೆನ್ಸಿಕ್ ಸೈನ್ಸ್ ಲ್ಯಾಬ್, ಅಹಮದಾಬಾದ್ ಇವರ ಅಭಿಪ್ರಾಯ ಮತ್ತು ಡೈರೆಕ್ಟರ್, ಫಿಂಗರ್ ಪ್ರಿಂಟ್ ಬ್ಯೂರೋ, ತಿರುವನಂತಪುರ ಇವರ ಅಭಿಪ್ರಾಯ (ಇಎಕ್ಸ್‌ಡಿ –14) ಪಡೆದಿದ್ದು ಎಲ್ಲರೂ ಆರೋಪಿತ ಪೊಲೀಸ್ ಅಧಿಕಾರಿ–1 ರವರ ಅಭಿಪ್ರಾಯವನ್ನು ಪುಷ್ಟೀಕರಿಸಿದ್ದು ಸದರಿ ಮುದ್ರೆಗಳು Not Identical ಎಂಬ ಅಂಶವನ್ನು ಒಪ್ಪಿಕೊಂಡಿರುತ್ತಾರೆ. ಆದ್ದರಿಂದ ಆರೋಪಿತ ಪೊಲೀಸ್ ಅಧಿಕಾರಿ–1 ರವರು ನೀಡಿರುವ ಅಭಿಪ್ರಾಯವೇ ಸರಿಯಾದುದು ಎಂದು ಕಂಡು ಬರುತ್ತದೆ ಎಂದು ವಿಚಾರಣಾಧಿಕಾರಿಗಳು ಅಭಿಪ್ರಾಯಪಟ್ಟಿದ್ದಾರೆ.

ಮೇಲೆ ತಿಳಿಸಲಾದ ವಿಚಾರಣಾಧಿಕಾರಿಗಳ ಅಭಿಪ್ರಾಯವನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 33 ಪೊಸಿಪ 2006 ಬೆಂಗಳೂರು, ದಿನಾಂಕ: 25ನೇ ಜುಲೈ 2008.**

ಶ್ರೀ ಹರಿಶ್ಚಂದ್ರ ಹೆಜ್‌ಮಾಡಿ, ಪೊಲೀಸ್ ನಿರೀಕ್ಷಕರು, ಬೆರಳು ಮುದ್ರೆ ಘಟಕ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಹಾಗೂ ಶ್ರೀ ತಮ್ಮಣ್ಣ, ಪೊಲೀಸ್ ಉಪಾಧೀಕ್ಷಕರು, ಬೆರಳುಮುದ್ರೆ ಸಂಗ್ರಹಾಲಯ, ಪಶ್ಚಿಮ ವಲಯ, ಮಂಗಳೂರು

ಇವರುಗಳ ವಿರುದ್ಧ ಹೊರಿಸಲಾದ ಆರೋಪಗಳು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗದೇ ಇರುವುದರಿಂದ ಈ ಇಬ್ಬರೂ ಅಧಿಕಾರಿಗಳ ವಿರುದ್ಧ ಹೊರಿಸಲಾದ ಆರೋಪದಿಂದ ದೋಷಮುಕ್ತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1135

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಆರ್. ಪ್ರಭಾಶಂಕರ್, ಎ.ಸಿ.ಪಿ. ಸಿ.ಎ.ಆರ್., ಮೈಸೂರು ನಗರ ಇವರ ವಿರುದ್ಧದ ಇಲಾಖಾ ವಿಚಾರಣೆಯ ಅಂತಿಮ ಆದೇಶದ ಬಗ್ಗೆ.

**ಓದಲಾಗಿದೆ:**
1. ಡಿಜಿ ಮತ್ತು ಐಜಿಪಿ ರವರ ಪತ್ರದ ಸಂಖ್ಯೆ:ಸಿಬಿ(5)25/2005–06 ದಿನಾಂಕ 14–10–2005.
2. ಸರ್ಕಾರದ ಆದೇಶ ಸಂಖ್ಯೆ:ಒಇ 279 ಪೊಸಿಪ 2005 ದಿನಾಂಕ 18–11–2006.
3. ಡಿಜಿ ಮತ್ತು ಐಜಿಪಿ ರವರ ಪತ್ರದ ಸಂಖ್ಯೆ:ಸಿಬಿ(5)25/2005–06 ದಿನಾಂಕ 09–06–2008.

**ಪ್ರಸ್ತಾವನೆ:**

ಶ್ರೀ ಆರ್. ಪ್ರಭಾಶಂಕರ್, ಎ.ಸಿ.ಪಿ. ಸಿ.ಎ.ಆರ್., ಮೈಸೂರು ನಗರ ಇವರು ನಗರ ಸಶಸ್ತ್ರ ಪಡೆಯ 93 ಸಿಬ್ಬಂದಿಗಳಿಗೆ ಮೈಸೂರು ಮತ್ತು ಚಾಮರಾಜನಗರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್, ಮೈಸೂರು ವತಿಯಿಂದ ಸಾಲಪಡೆಯಲು ಸಂಬಂಧಿಸಿದ ನಮೂನೆಗಳಿಗೆ ಬಟವಾಡೆ ಅಧಿಕಾರಿಯಾಗಿ ಸಹಿ ಮಾಡುವ ಪ್ರಾಧಿಕಾರವನ್ನು ಹೊಂದಿಲ್ಲದಿದ್ದರೂ ಬಟವಾಡೆ ಅಧಿಕಾರಿಯಾಗಿ ಸಹಿ ಮಾಡುವ ಮೂಲಕ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ದುರ್ನಡತೆ ಪ್ರದರ್ಶಿಸಿರುವುದರಿಂದ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮ 1965/89 ನಿಯಮ 6ರ ಪ್ರಕಾರ ಇಲಾಖಾ ವಿಚಾರಣೆಗೆ ಆದೇಶಿಸುವಂತೆ ಓದಲಾದ (1)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ, ಬೆಂಗಳೂರು ಇವರು ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದರು.

ಸದರಿ ಆರೋಪಿತ ಪೊಲೀಸ್ ಅಧಿಕಾರಿಯ ವಿರುದ್ಧ ಕೆ.ಎಸ್.ಪಿ (ಡಿಪಿ) ನಿಯಮ 1965/89 ನಿಯಮ 6ರ ಪ್ರಕಾರ ಇಲಾಖಾ ವಿಚಾರಣೆ ನಡೆಸಲು ಹಾಗೂ ಪೊಲೀಸ್ ಅಧೀಕ್ಷಕರು, ಮೈಸೂರು ಜಿಲ್ಲೆ ಇವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ಓದಲಾದ (2)ರ ಸರ್ಕಾರದ ಆದೇಶದಲ್ಲಿ ನೇಮಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

"ಆರೋಪಿತ ಪೊಲೀಸ್ ಅಧಿಕಾರಿ ರವರು ನಗರ ಸಶಸ್ತ್ರ ಪಡೆಯ 93 ಸಿಬ್ಬಂದಿಗಳಿಗೆ ಮೈಸೂರು ಮತ್ತು ಚಾಮರಾಜನಗರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್, ಮೈಸೂರು ವತಿಯಿಂದ ಸಾಲ ಪಡೆಯಲು ಸಂಬಂಧಿಸಿದ ನಮೂನೆಗಳಿಗೆ ಬಟವಾಡೆ ಅಧಿಕಾರಿಯಾಗಿ ಸಹಿ ಮಾಡುವ ಪ್ರಾಧಿಕಾರವನ್ನು ಹೊಂದಿಲ್ಲದಿದ್ದರೂ ಬಟವಾಡೆ ಅಧಿಕಾರಿಯಾಗಿ ಸಹಿ ಮಾಡುವ ಮೂಲಕ ಅಧಿಕಾರ ವ್ಯಾಪ್ತಿಯನ್ನು ಮೀರಿ ಅಧಿಕಾರ ದುರುಪಯೋಗ ಪಡಿಸಿಕೊಳ್ಳುವುದರ ಮೂಲಕ ದುರ್ನಡತೆ ಪ್ರದರ್ಶಿಸಿರುವ ಬಗ್ಗೆ"

ಇಲಾಖಾ ವಿಚಾರಣೆಯ ಸಂದರ್ಭದಲ್ಲಿ ವಿಚಾರಣಾಧಿಕಾರಿಗಳು ಅಭಿಯೋಗ ಪರವಾಗಿ 03 ಜನ ಸಾಕ್ಷಿದಾರರನ್ನು 97 ಅಭಿಯೋಗ ದಾಖಲೆಗಳನ್ನು ಹಾಗೂ ಆರೋಪಿತ ಪೊಲೀಸ್ ಅಧಿಕಾರಿ ಪರವಾಗಿ ಒಂದು ರಕ್ಷಣಾ ಸಾಕ್ಷಿದಾರರನ್ನು ಮತ್ತು 23 ರಕ್ಷಣಾ ದಾಖಲಾತಿಗಳನ್ನು ಪರಿಶೀಲಿಸಲಾಗಿರುವುದಾಗಿ ವರದಿ ಮಾಡಿರುತ್ತಾರೆ. ರಕ್ಷಣಾ ಸಾಕ್ಷಿಗಳ ಹೇಳಿಕೆಗಳ ಆಧಾರದಿಂದ ಆರೋಪಿತ ಪೊಲೀಸ್ ಅಧಿಕಾರಿ ರವರು ಮೇಲಾಧಿಕಾರಿಗಳ ಲಿಖಿತ ಆದೇಶವಿಲ್ಲದೇ ಸಿ.ಎ.ಆರ್. ಸಿಬ್ಬಂದಿಗಳ ಸಾಲದ ವಾಗ್ದಾನ ಪತ್ರಗಳನ್ನು ಸಹಿ ಮಾಡಿರುವುದು ಸಾಬೀತಾಗಿದ್ದು ಅವರು ತಿಳಿಸಿರುವಂತೆ ತಮಗೆ ಅಂದಿನ ಪೊಲೀಸ್ ಆಯುಕ್ತರು ಮೌಖಿಕ ಆದೇಶ ನೀಡಿದ್ದರು ಎಂಬ ವಾದ ನಂತರದ ಯೋಚನೆಯಾಗಿದ್ದು, ಈ ಬಗ್ಗೆ ಲಿಖಿತ ಆದೇಶವಿಲ್ಲದಿರುವುದು ಮತ್ತು ಆದೇಶವನ್ನು ಹಾಜರುಪಡಿಸದಿರುವುದರಿಂದ ಅದನ್ನು ಪರಿಗಣಿಸಲು ಸಾಧ್ಯವಿಲ್ಲ. ಆರೋಪಿತ ಪೊಲೀಸ್ ಅಧಿಕಾರಿ ರವರು ಸಹಿ ಮಾಡಿರುವ ಸಾಲದ ವಾಗ್ದಾನ ಪತ್ರಗಳು ಮತ್ತು ಅವುಗಳಲ್ಲಿನ ಸಹಿಗಳು ಆರೋಪಿತ ಪೊಲೀಸ್ ಅಧಿಕಾರಿಯವರದ್ದೇ ಎಂದು ಧೃಢಪಟ್ಟಿರುತ್ತದೆ. ಆದುದರಿಂದ ಮೇಲಧಿಕಾರಿಗಳ ಆದೇಶವಿಲ್ಲದೆ ಸಾಲದ ವಾಗ್ದಾನ ಪತ್ರಗಳನ್ನು ಸಹಿ ಮಾಡಿ ತಮ್ಮ ಅಧಿಕಾರ ವ್ಯಾಪ್ತಿಯನ್ನು ದುರುಪಯೋಗಪಡಿಸಿಕೊಂಡು ಕರ್ತವ್ಯದಲ್ಲಿ ದುರ್ನಡತೆ ಪ್ರದರ್ಶಿಸಿರುತ್ತಾರೆಂಬ, ಆರೋಪವು ಇಲಾಖಾ ವಿಚಾರಣೆ ಕಾಲದಲ್ಲಿ ಸಾಬೀತಾಗಿರುತ್ತದೆಂಬ ತೀರ್ಮಾನಕ್ಕೆ ಬಂದಿರುವುದಾಗಿ ಓದಲಾದ (3)ರಲ್ಲಿನ ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರದೊಂದಿಗೆ ಒದಗಿಸಲಾದ ವಿಚಾರಣಾ ವರದಿಯಲ್ಲಿ ತಿಳಿಸಿದ್ದಾರೆ.

ಸರ್ಕಾರವು ವಿಚಾರಣಣಾಧಿಕಾರಿಗಳ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 279 ಪೊಸಿಪ 2005 ಬೆಂಗಳೂರು, ದಿನಾಂಕ: 07ನೇ ಆಗಸ್ಟ್ 2008.**

ಶ್ರೀ ಆರ್. ಪ್ರಭಾಶಂಕರ್, ಎ.ಸಿ.ಪಿ. ಸಿ.ಎ.ಆರ್., ಮೈಸೂರು ನಗರ ಇವರಿಂದ ಈ ಪ್ರಕರಣದಲ್ಲಿ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟವಾಗದಿರುವುದನ್ನು ಗಮನಿಸಿ ಇವರಿಗೆ "ವಾಗ್ದಂಡನೆ" ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1178

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಬೆಂಗಳೂರು ಜಿಲ್ಲೆಯ ಕಾಡುಗೋಡಿ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ–194/05 ಕಲಂ 498(ಎ), 304 (ಬಿ) ಐಪಿಸಿ ಪ್ರಕರಣದಲ್ಲಿ ಲೋಪವೆಸಗಿದರೆನ್ನಲಾದ ಅಧಿಕಾರಿಗಳ ವಿರುದ್ಧದ ಶಿಸ್ತು ಕ್ರಮದ ಅಂತಿಮ ಅದೇಶದ ಬಗ್ಗೆ.

**ಓದಲಾಗಿದೆ:**
1. ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ: ಸಿಬಿ(5)39/2006–07, ದಿನಾಂಕ 25–05–2007.
2. ಸರ್ಕಾರದ ಆದೇಶ ಸಂಖ್ಯೆ: ಒಇ 224 ಪೊಸಿಪ 2007, ದಿನಾಂಕ 18–7–2007 ಮತ್ತು 22–12–2007.
3. ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ: ಸಿಬಿ (5)39/ 2006–07, ದಿನಾಂಕ 6–2–2008, 15–5–2008.

**ಪ್ರಸ್ತಾವನೆ:**

ಶ್ರೀ ಬಿ.ಟಿ.ಸತ್ಯನಾರಾಯಣ, ಎಎಸ್ಐ, ಶ್ರೀ ಟಿ.ಶ್ರೀನಿವಾಸ ರೆಡ್ಡಿ, ಪಿಎಸ್ಐ (ಕಾ&ಸು) ಶ್ರೀ ಎಂ.ಎಸ್. ರಮೇಶ್‌ರಾವ್, ಪಿಎಸ್ಐ, ಶ್ರೀ ಹೆಚ್.ಜೆ. ತಿಪ್ಪೇಸ್ವಾಮಿ, ಪಿಐ, ಶ್ರೀ ಎನ್.ಸಿ. ನಾಗರಾಜ್, ಪಿಐ ಮತ್ತು ಶ್ರೀ ಕೆ.ಆರ್. ಸುರೇಂದ್ರರಾವ್, ಡಿಎಸ್‌ಪಿ ಇವರುಗಳು ಬೆಂಗಳೂರು ಜಿಲ್ಲೆಯ ಕಾಡುಗೋಡಿ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 194/05 ಕಲಂ 498(ಎ), 304(ಬಿ) ಐಪಿಸಿ ಪ್ರಕರಣದಲ್ಲಿ ಸಮರ್ಪಕ ತನಿಖೆ ಮಾಡದೇ ಕರ್ತವ್ಯ ಲೋಪವೆಸಗಿದ್ದಾರೆಂದು, ಸದರಿಯವರುಗಳ ವಿರುದ್ಧ ಕೆ.ಎಸ್.ಪಿ. (ಡಿ.ಪಿ.) ನಿಯಮಗಳು 1965/89ರ ನಿಯಮ 6 ಉಪನಿಯಮ 2 ಮತ್ತು 8ರನ್ವಯ ಜಂಟಿ ಇಲಾಖಾ ವಿಚಾರಣೆ ನಡೆಸಲು ಮೇಲೆ ಓದಲಾದ (1)ರಲ್ಲಿ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ಇವರು ಸರ್ಕಾರವನ್ನು ಕೋರಿದ್ದರು. ಸರ್ಕಾರವು ಶ್ರೀ ಎಂ.ಟಿ. ಉತ್ತಪ್ಪ, ಸಹಾಯಕ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ (ಸಾಮಾನ್ಯ) ಪ್ರಧಾನ ಕಛೇರಿ, ಬೆಂಗಳೂರು ಇವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ಓದಲಾದ (2)ರ ಆದೇಶದಲ್ಲಿ ನೇಮಿಸಲಾಗಿತ್ತು. ಸದರಿ ಆರೋಪಿತ ಪೊಲೀಸ್ ಅಧಿಕಾರಿಗಳ ವಿರುದ್ಧ ಈ ಕೆಳಕಂಡ ದೋಷಾರೋಪಣೆ ಹೊರಿಸಲಾಗಿತ್ತು.

ಶ್ರೀ ಬಿ.ಟಿ. ಸತ್ಯನಾರಾಯಣ, ಎಎಸ್ಐ, ಕಾಡುಗೋಡಿ ಪೊಲೀಸ್ ಠಾಣೆ ಆದ ನೀವು ಬೆಂಗಳೂರು ಜಿಲ್ಲೆಯ ಕಾಡುಗೋಡಿ ಪೊಲೀಸ್ ಠಾಣೆ ಮೊ.ಸಂ. 194/05 ಕಲಂ 498(ಎ), 304 (ಬಿ) ಐಪಿಸಿ ಪ್ರಕರಣದಲ್ಲಿ ದಿ.15/6/05 ರಂದು ಶ್ರೀ ಸಿ.ಎಂ. ಚನ್ನಕೇಶವ ರವರಿಂದ ಫಿರ್ಯಾದಿ ಪಡೆದಿದ್ದು, ಸದರಿ ಫಿರ್ಯಾದಿನಲ್ಲಿ ಮೃತಳ ಮದುವೆ ಕಾಲದಲ್ಲಿ ವರದಕ್ಷಿಣೆ ನೀಡಿದ ಬಗ್ಗೆ, ನಂತರ ಹೆಚ್ಚಿನ ವರದಕ್ಷಿಣೆಗಾಗಿ ಕಿರುಕುಳ ನೀಡಿದ ಬಗ್ಗೆ, ಸದರಿ ಕಿರುಕುಳದಿಂದಲೇ ಮೃತಳು ಸತ್ತಿರುತ್ತಾಳೆಂದು ಸ್ಪಷ್ಟವಾಗಿ ತಿಳಿಸಿದ್ದರೂ, ನಿಗಧಿತ ಕಲಂಗಳನ್ನು ಅಳವಡಿಸದೆ, ಕೇವಲ 174 ಸಿಆರ್‌ಪಿಸಿ ಅಡಿಯಲ್ಲಿ ಪ್ರಕರಣ ದಾಖಲಿಸಿ ಕೊಂಡಿರುತ್ತೀರಿ. ಕೃತ್ಯ ನಡೆದ ಸ್ಥಳಕ್ಕೆ ಕೂಡಲೇ ಭೇಟಿ ನೀಡದೆ, ಪಂಚನಾಮೆ ಮಾಡದೆ, ಮೃತಳು ನೇಣಿಗೆ ಉಪಯೋಗಿಸಿದ್ದ ಸೀರೆಯನ್ನು ಜಪ್ತಿ ಮಾಡದೆ, ಮೃತಳ ರಕ್ತ ಸಂಬಂಧಿಗಳ ಮತ್ತು ಅಕ್ಕ ಪಕ್ಕದವರ ಹೇಳಿಕೆಗಳನ್ನು ಪಡೆದುಕೊಳ್ಳದೆ, ಆರೋಪಿತರು ತಪ್ಪಿಸಿಕೊಳ್ಳಲು ಸಹಾಯ ಮಾಡುವ ಮೂಲಕ ಮತ್ತು ವಿಳಂಬ ರೀತಿಯ ತನಿಖೆ ಮಾಡುವ ಮೂಲಕ ನಿಮ್ಮ ಕರ್ತವ್ಯದಲ್ಲಿ ಕರ್ತವ್ಯ ಲೋಪ, ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ.

ಶ್ರೀ ಟಿ. ಶ್ರೀನಿವಾಸ ರೆಡ್ಡಿ, ಪಿಎಸ್ಐ (ಕಾ & ಸು) ಆದ ನೀವು ಬೆಂಗಳೂರು ಜಿಲ್ಲೆಯ ಕಾಡುಗೋಡಿ ಪೊಲೀಸ್ ಠಾಣೆ ಮೊ.ಸಂ.194/05 ಕಲಂ 498(ಎ), 304 (ಬಿ) ಐಪಿಸಿ ಪ್ರಕರಣದ ತನಿಖೆಯನ್ನು ದಿ.17/6/05 ರಿಂದ 25/6/05 ರವರೆಗೆ ನಡೆಸಿದ್ದು, ಪ್ರಥಮ ವರ್ತಮಾನ ವರದಿಯಲ್ಲಿ ಮೃತಳ ಮದುವೆ ಕಾಲದಲ್ಲಿ ವರದಕ್ಷಿಣೆ ನೀಡಿದ ಬಗ್ಗೆ, ನಂತರ ಹೆಚ್ಚಿನ ವರದಕ್ಷಿಣೆಗಾಗಿ ಕಿರುಕುಳ ನೀಡಿದ ಬಗ್ಗೆ, ಸದರಿ ಕಿರುಕುಳದಿಂದಲೇ ಮೃತಳು ಸತ್ತಿರುತ್ತಾಳೆಂದು ಸ್ಪಷ್ಟವಾಗಿ ತಿಳಿಸಿದ್ದರೂ, ನಿಗಧಿತ ಕಲಂಗಳನ್ನು ಅಳವಡಿಸದೆ, ಕೇವಲ 174 ಸಿಆರ್‌ಪಿಸಿ ಅಡಿಯಲ್ಲಿ ಪ್ರಕರಣ ದಾಖಲಿಸಿ ಕೊಂಡಿರುತ್ತೀರಿ. ಕೃತ್ಯ ನಡೆದ ಸ್ಥಳಕ್ಕೆ ಕೂಡಲೇ ಭೇಟಿ ನೀಡದೆ, ಪಂಚನಾಮೆ ಮಾಡದೆ, ಮೃತಳು ನೇಣಿಗೆ ಉಪಯೋಗಿಸಿದ್ದ ಸೀರೆಯನ್ನು ಜಪ್ತಿ ಮಾಡದೆ, ಮೃತಳ ರಕ್ತ ಸಂಬಂಧಿಗಳ ಮತ್ತು ಅಕ್ಕ ಪಕ್ಕದವರ ಹೇಳಿಕೆಗಳನ್ನು ಪಡೆದುಕೊಳ್ಳದೆ, ಆರೋಪಿಗಳನ್ನು ತಕ್ಷಣವೇ ದಸ್ತಗಿರಿ ಮಾಡದೆ,

ಆರೋಪಿಗಳು ತಪ್ಪಿಸಿಕೊಳ್ಳಲು ಸಹಾಯ ಮಾಡುವ ಮೂಲಕ ತಮ್ಮ ಕರ್ತವ್ಯದಲ್ಲಿ ಕರ್ತವ್ಯ ಲೋಪ, ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ.

ಶ್ರೀ ಎಂ.ಎಸ್. ರಮೇಶ್‌ರಾವ್, ಪಿಎಸ್ಐ ಆದ ನೀವು ಬೆಂಗಳೂರು ಜಿಲ್ಲೆಯ ಕಾಡುಗೋಡಿ ಪೊಲೀಸ್ ಠಾಣೆ ಮೊ.ಸಂ.194/05 ಕಲಂ 498(ಎ), 304 (ಬಿ) ಐಪಿಸಿ ಪ್ರಕರಣದ ತನಿಖೆಯನ್ನು ದಿ.28/6/05 ರಿಂದ ವಹಿಸಿಕೊಂಡಿದ್ದು, ಕೇಸಿನ ಪ್ರಥಮ ವರ್ತಮಾನ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸದೆ, ಅದರಲ್ಲಿ ಮೃತಳ ಮದುವೆ ಕಾಲದಲ್ಲಿ ವರದಕ್ಷಿಣೆ ನೀಡಿದ ಬಗ್ಗೆ, ನಂತರ ಹೆಚ್ಚಿನ ವರದಕ್ಷಿಣೆಗಾಗಿ ಕಿರುಕುಳ ನೀಡಿದ ಬಗ್ಗೆ, ಸದರಿ ಕಿರುಕುಳದಿಂದಲೇ ಮೃತಳು ಸತ್ತಿರುತ್ತಾಳೆಂದು ಸ್ಪಷ್ಟವಾಗಿ ತಿಳಿಸಿದ್ದರೂ, ನಿಗಧಿತ ಕಲಂಗಳನ್ನು ಅಳವಡಿಸದೆ, ಕೃತ್ಯ ನಡೆದ ಸ್ಥಳಕ್ಕೆ ಭೇಟಿ ನೀಡದೆ, ಪಂಚನಾಮೆ ಮಾಡದೆ, ಮೃತಳು ನೇಣಿಗೆ ಉಪಯೋಗಿಸಿದ್ದ ಸೀರೆಯನ್ನು ಜಪ್ತಿ ಮಾಡದೆ, ಮೃತಳ ರಕ್ತ ಸಂಬಂಧಿಗಳ ಮತ್ತು ಅಕ್ಕ ಪಕ್ಕದವರ ಹೇಳಿಕೆಗಳನ್ನು ಪಡೆದುಕೊಳ್ಳದೆ, ಆರೋಪಿತರು ತಪ್ಪಿಸಿಕೊಳ್ಳಲು ಸಹಾಯ ಮಾಡುವ ಮೂಲಕ ಹಾಗೂ ಇವರು ದಿ.28/6/05 ರಿಂದ 11/7/05 ರವರೆಗೆ ಕೇವಲ 174 ಸಿಆರ್‌ಪಿಸಿ ಅಡಿಯಲ್ಲೇ ತನಿಖೆ ಮುಂದುವರೆಸಿದ್ದು, ನಂತರ ತಹಶೀಲ್ದಾರರು ನೀಡಿದ ವರದಿಯ ಮೇರೆಗೆ ದಿ.12/7/05 ರಂದು ಕಲಂ 498 (ಎ) 304 (ಬಿ) ಕಲಂಗಳನ್ನು ಅಳವಡಿಸಿ, ನಿಗಧಿತ ಕಲಂಗಳನ್ನು ಅಳವಡಿಸುವಲ್ಲಿ ಮತ್ತು ತನಿಖೆಯಲ್ಲಿ ಅನಗತ್ಯವಾಗಿ 17 ದಿನಗಳ ವಿಳಂಬ ಮಾಡುವ ಮೂಲಕ ತಮ್ಮ ಕರ್ತವ್ಯದಲ್ಲಿ ಕರ್ತವ್ಯ ಲೋಪ, ಬೇಜವಾಬ್ದಾರಿತನ ಎಸಗಿರುತ್ತೀರಿ.

ಶ್ರೀ ಹೆಚ್.ಜೆ. ತಿಪ್ಪೇಸ್ವಾಮಿ, ಸಿಪಿಐ ಹಾಲಿ ಚಿಕ್ಕಬಳ್ಳಾಪುರ ವೃತ್ತ ಆದ ನೀವು ಬೆಂಗಳೂರು ಜಿಲ್ಲೆಯ ಕಾಡುಗೋಡಿ ಪೊಲೀಸ್ ಠಾಣೆ ಮೊ.ಸಂ.194/05 ಕಲಂ 498(ಎ), 304 (ಬಿ) ಐಪಿಸಿ ಪ್ರಕರಣದ ಪ್ರಥಮ ವರ್ತಮಾನ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ಅದರಲ್ಲಿರುವ ಅಪರಾಧಗಳ ವಿವರಗಳನ್ನು ಗಮನಿಸಿ, ಸರಿಯಾದ ಕಲಂಗಳನ್ನು ಅಳವಡಿಸುವಂತೆ ಠಾಣೆಯ ಎಸ್‌ಹೆಚ್‌ಓ/ಪಿಎಸ್ಐ ರವರಿಗೆ ಸೂಕ್ತ ಮಾರ್ಗದರ್ಶನ ನೀಡಿರುವುದಿಲ್ಲ ಅಥವಾ ತಾವೇ ಕ್ರಮ ಕೈಗೊಂಡಿರುವುದಿಲ್ಲ. ಇದರಿಂದ ಇಂತಹ ಒಂದು ಘೋರ ಅಪರಾಧವನ್ನು ಮುಚ್ಚಿಹಾಕಲು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಭಾಗಿಯಾಗಿದ್ದು, ಅನಗತ್ಯ ವಿಳಂಬ ಉಂಟು ಮಾಡಿ, ಆರೋಪಿಗಳು ತಪ್ಪಿಸಿಕೊಳ್ಳಲು ಸಹಾಯ ಮಾಡಿರುತ್ತಾರೆ. ಕೃತ್ಯ ನಡೆದ ಸ್ಥಳಕ್ಕೆ ಭೇಟಿ ನೀಡದೆ, ಪಂಚನಾಮೆ ಮಾಡದೆ, ಮೃತಳು ನೇಣಿಗೆ ಉಪಯೋಗಿಸಿದ್ದ ಸೀರೆಯನ್ನು ಜಪ್ತಿ ಮಾಡದೆ, ಮೃತಳ ರಕ್ತ ಸಂಬಂಧಿಗಳ ಮತ್ತು ಅಕ್ಕ ಪಕ್ಕದವರ ಹೇಳಿಕೆಗಳನ್ನು ಪಡೆದುಕೊಳ್ಳದೆ, ಆರೋಪಿತರನ್ನು ದಸ್ತಗಿರಿ ಮಾಡುವ ಬಗ್ಗೆ ಕ್ರಮ ತೆಗೆದುಕೊಳ್ಳದೆ ವಿಳಂಬ ನೀತಿ ಅನುಸರಿಸುವ ಮೂಲಕ ನೀವು ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ, ಬೇವಾಬ್ದಾರಿತನ ಮತ್ತು ಕರ್ತವ್ಯ ದುರುಪಯೋಗ ಪಡಿಸಿಕೊಂಡಿರುತ್ತೀರಿ.

ಶ್ರೀ ಎನ್.ಸಿ. ನಾಗರಾಜ್, ಸಿಪಿಐ ಹಾಲಿ ಡಿಎಸ್‌ಬಿ, ಡಿಪಿಓ, ಬೆಂಗಳೂರು ಜಿಲ್ಲೆ ಆದ ನೀವು ಬೆಂಗಳೂರು ಜಿಲ್ಲೆಯ ಕಾಡುಗೋಡಿ ಪೊಲೀಸ್ ಠಾಣೆ ಮೊ.ಸಂ.194/05 ಕಲಂ 498(ಎ), 304 (ಬಿ) ಐಪಿಸಿ ಪ್ರಕರಣದ ತನಿಖೆಯನ್ನು ದಿ.24/6/05 ರಿಂದ 19/7/05 ರವರೆಗೆ ಅಂದರೆ ಸಿಓಡಿ ರವರಿಗೆ ತನಿಖೆಯನ್ನು ವಹಿಸಿ ತನಕ ಕರ್ತವ್ಯ ನಿರ್ವಹಿಸಿದ್ದು, ಕೇಸಿನ ಪ್ರಥಮ ವರ್ತಮಾನ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ಅದರಲ್ಲಿರುವ ಅಪರಾಧಗಳ ವಿವರಗಳನ್ನು ಗಮನಿಸಿ, ಸರಿಯಾದ ಕಲಂಗಳನ್ನು ಅಳವಡಿಸುವಂತೆ ಠಾಣೆಯ ಎಸ್‌ಹೆಚ್‌ಓ/ಪಿಎಸ್ಐ ರವರಿಗೆ ಸೂಕ್ತ ಮಾರ್ಗದರ್ಶನ ನೀಡಿರುವುದಿಲ್ಲ ಅಥವಾ ತಾವೇ ಕ್ರಮ ಕೈಗೊಂಡಿರುವುದಿಲ್ಲ. ಇದರಿಂದ ಇಂತಹ ಒಂದು ಘೋರ ಅಪರಾಧವನ್ನು ಮುಚ್ಚಿಹಾಕಲು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಭಾಗಿಯಾಗಿದ್ದು, ಅನಗತ್ಯ ವಿಳಂಬ ಉಂಟು ಮಾಡಿ, ಆರೋಪಿಗಳು ತಪ್ಪಿಸಿಕೊಳ್ಳಲು ಸಹಾಯ ಮಾಡಿರುತ್ತೀರಿ. ಕೃತ್ಯ ನಡೆದ ಸ್ಥಳಕ್ಕೆ ಭೇಟಿ ನೀಡದೆ, ಪಂಚನಾಮೆ ಮಾಡದೆ, ಮೃತಳು ನೇಣಿಗೆ ಉಪಯೋಗಿಸಿದ್ದ ಸೀರೆಯನ್ನು ಜಪ್ತಿ ಮಾಡದೆ, ಮೃತಳ ರಕ್ತ ಸಂಬಂಧಿಗಳ ಮತ್ತು ಅಕ್ಕ ಪಕ್ಕದವರ ಹೇಳಿಕೆಗಳನ್ನು ಪಡೆದುಕೊಳ್ಳದೆ, ಆರೋಪಿತರನ್ನು ದಸ್ತಗಿರಿ ಮಾಡುವ ಬಗ್ಗೆ ಕ್ರಮ ತೆಗೆದುಕೊಳ್ಳದೆ ಇರುವ ಮೂಲಕ ನೀವು ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ, ಬೇವಾಬ್ದಾರಿತನ ಮತ್ತು ಕರ್ತವ್ಯ ದುರುಪಯೋಗ ಪಡಿಸಿಕೊಂಡಿರುತ್ತೀರಿ.

ಶ್ರೀ ಕೆ.ಆರ್. ಸುರೇಂದ್ರರಾವ್, ಡಿಎಸ್‌ಪಿ ಹಾಲಿ ಎಸಿಪಿ, ಶೇಷಾದ್ರಿಪುರಂ ಉಪ ವಿಭಾಗ, ಬೆಂಗಳೂರು ಆದ ನೀವು ಬೆಂಗಳೂರು ಜಿಲ್ಲೆಯ ಕಾಡುಗೋಡಿ ಪೊಲೀಸ್ ಠಾಣೆ ಮೊ.ಸಂ.194/05 ಕಲಂ 498(ಎ), 304 (ಬಿ) ಐಪಿಸಿ ಪ್ರಕರಣದ ಸ್ಥಾಯಿ ಆದೇಶದ ಸಂಖ್ಯೆ: 4787 ರಂತೆ ಸದರಿ ಪ್ರಕರಣದ ತನಿಖೆಯನ್ನು ವಹಿಸಿ ಕೊಂಡಿರುವುದಿಲ್ಲ. ಕೇಸಿನ ಪ್ರಥಮ ವರ್ತಮಾನ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ಅದರಲ್ಲಿ ಮೃತಳ ಮದುವೆ ಕಾಲದಲ್ಲಿ ವರದಕ್ಷಿಣೆ ನೀಡಿದ ಬಗ್ಗೆ, ನಂತರ ಹೆಚ್ಚಿನ ವರದಕ್ಷಿಣೆಗಾಗಿ ಕಿರುಕುಳ ನೀಡಿದ ಬಗ್ಗೆ, ಸದರಿ ಕಿರುಕುಳದಿಂದಲೇ ಮೃತಳು ಸತ್ತಿರುತ್ತಾಳೆಂದು ಸ್ಪಷ್ಟವಾಗಿ ತಿಳಿಸಿದ್ದರೂ, ನಿಗಧಿತ ಕಲಂಗಳನ್ನು ಅಳವಡಿಸದೆ ಇರುವ ಬಗ್ಗೆ ಹಾಗೂ ಸರಿಯಾದ ಕಲಂಗಳನ್ನು ಅಳವಡಿಸುವಂತೆ ಠಾಣೆಯ ಎಸ್‌ಹೆಚ್‌ಓ/ಪಿಎಸ್ಐ ರವರಿಗೆ ಸೂಕ್ತ ಮಾರ್ಗದರ್ಶನ ನೀಡಿರುವುದಿಲ್ಲ ಅಥವಾ ತಾವೇ ಕ್ರಮ ಕೈಗೊಂಡಿರುವುದಿಲ್ಲ. ಇದರಿಂದ ಇಂತಹ ಒಂದು ಘೋರ ಅಪರಾಧವನ್ನು ಮುಚ್ಚಿಹಾಕಲು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಭಾಗಿಯಾಗಿದ್ದು, ಅನಗತ್ಯ ವಿಳಂಬ ಉಂಟು ಮಾಡಿ, ಆರೋಪಿಗಳು ತಪ್ಪಿಸಿಕೊಳ್ಳಲು ಸಹಾಯ ಮಾಡಿರುತ್ತೀರಿ. ಒಂದು ವೇಳೆ ಈ ಮೊಕದ್ದಮೆಯನ್ನು

ದಿ.15/6/05 ರಂದೇ ವಹಿಸಿಕೊಂಡಿದ್ದಲ್ಲಿ, ತನಿಖೆಯಲ್ಲಿ ವಿಳಂಬ ಆಗುವುದನ್ನು ತಡೆಯಬಹುದಾಗಿತ್ತು. ಕೃತ್ಯ ನಡೆದ ಸ್ಥಳಕ್ಕೆ ಭೇಟಿ ನೀಡದೆ, ಪಂಚನಾಮೆ ಮಾಡದೆ, ಮೃತಳು ನೇಣಿಗೆ ಉಪಯೋಗಿಸಿದ್ದ ಸೀರೆಯನ್ನು ಜಪ್ತಿ ಮಾಡದೆ, ಮೃತಳ ರಕ್ತ ಸಂಬಂಧಿಗಳ ಮತ್ತು ಅಕ್ಕ ಪಕ್ಕದವರ ಹೇಳಿಕೆಗಳನ್ನು ಪಡೆದುಕೊಳ್ಳದೆ, ಆರೋಪಿತರನ್ನು ದಸ್ತಗಿರಿ ಮಾಡುವ ಬಗ್ಗೆ ಕ್ರಮ ತೆಗೆದುಕೊಂಡಿರುವುದಿಲ್ಲ. ಶವ ಹೊರತೆಗೆಸುವ ಸಮಯದಲ್ಲಿ ಹಾಜರಿರುವುದಿಲ್ಲ. ಕಾಟಾಚಾರಕ್ಕೆ ಒಂದೇ ಸಿಡಿಯಲ್ಲಿ ದಿ.15/7/05 ರಂದು ಬರೆದು ಮುಗಿಸುವ ಮೂಲಕ ನೀವು ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ ಮತ್ತು ಕರ್ತವ್ಯ ದುರುಪಯೋಗ ಪಡಿಸಿಕೊಂಡಿರುತ್ತೀರಿ.

ಇಲಾಖಾ ವಿಚಾರಣಾಧಿಕಾರಿಗಳ ಅಂತಿಮ ವರದಿಯನ್ನು ಓದಲಾದ (3)ರ ಪತ್ರದಲ್ಲಿ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದಾರೆ.

ವಿಚಾರಣಾಧಿಕಾರಿಗಳು ಅಂತಿಮ ವರದಿಯಲ್ಲಿ ಈ ಕೆಳಕಂಡಂತೆ ಅಭಿಪ್ರಾಯಪಟ್ಟಿದ್ದಾರೆ.

ಕಾಡುಗೋಡಿ ಪೊಲೀಸ್ ಠಾಣೆಯಲ್ಲಿ ದಿನಾಂಕ 15–6–2005 ರಂದು ಯುಡಿಆರ್ ಸಂಖ್ಯೆ–15/2005 ಕಲಂ 174 ಸಿಆರ್‌ಪಿಸಿ ಪ್ರಕರಣವನ್ನು ಆಪೊಅ–1 ಎ.ಎಸ್.ಐ. ಬಿ.ಟಿ. ಸತ್ಯನಾರಾಯಣ ಇವರು ದಾಖಲಿಸಿ ಈ ಪ್ರಕರಣದ ಪ್ರಥಮ ವರ್ತಮಾನದ ವರದಿಯನು ದೊಡ್ಡಬಳ್ಳಾಪುರ ಉಪವಿಭಾಗದ ಮ್ಯಾಜಿಸ್ಟ್ರೇಟ್ ರವರಿಗೆ ಈ ಪ್ರಕರಣವು ದಾಖಲಾದ ದಿನಾಂಕ ಅಂದರೆ 15–6–2005 ರಂದೇ ಆಪೊಅ–1 ಇವರು ಕಳುಹಿಸಿಕೊಟ್ಟಿರುತ್ತಾರೆ.

ನಿಶಾನೆ ಪಿ–1ನ್ನು ಪರಿಶೀಲಿಸಿದಾಗ ಮೃತಳ ಮದುವೆಯ ಮುಂಚೆ ಮೃತಳ ಗಂಡನಾಗಲೀ ಅಥವಾ ಗಂಡನ ಕಡೆಯವರಾಗಲೀ ವರದಕ್ಷಿಣೆಯ ಬಗ್ಗೆ ಪ್ರಸ್ತಾಪಿಸಿ ವರದಕ್ಷಿಣೆಯನ್ನು ನಿಗದಿಮಾಡಿಕೊಂಡಿದ್ದ ಬಗ್ಗೆ ಯಾವುದೇ ವಿಷಯವಿರುವುದಿಲ್ಲ. ಅದೇ ರೀತಿಯಲ್ಲಿ ಮೃತಳ ಮದುವೆಯ ಸಮಯದಲ್ಲಿ ಮತ್ತು ಮದುವೆಯ ನಂತರ ನಿಗದಿತ ವರದಕ್ಷಿಣೆಯನ್ನು ಪಾವತಿಸದೇ ಇರುವ ಬಗ್ಗೆಯಾಗಲೀ ಮತ್ತು ವರದಕ್ಷಿಣೆಯನ್ನು ಪಾವತಿಸದೇ ಇದ್ದುದರಿಂದ ಆಕೆಯ ಗಂಡನಿಂದ ಮತ್ತು ಗಂಡನ ಮನೆಯವರಿಂದ ಕಿರುಕುಳ ಇದ್ದುದರಿಂದ ಆ ಕಿರುಕುಳವನ್ನು ಸಹಿಸಲು ಸಾಧ್ಯವಿಲ್ಲದೆ ಮಾಲಾ ನೇಣು ಹಾಕಿಕೊಂಡು ಆತ್ಮಹತ್ಯೆ ಮಾಡಿಕೊಂಡಿರುತ್ತಾಳೆ ಎಂಬ ಬಗ್ಗೆ ಯಾವುದೇ ವಿಷಯಗಳ ಪ್ರಸ್ತಾಪ ಇರುವುದಿಲ್ಲ. ಈ ವಿಷಯಗಳನ್ನು ಸಿಓಡಿಯ ತನಿಖಾಧಿಕಾರಿಯಾದ ಅಭಿಯೋಗ ಸಾಕ್ಷಿ–12 ಡಿಎಸ್‌ಪಿ ಟಿ. ಸತ್ಯನಾರಾಯಣ ಇವರು ತಮ್ಮ ಸಾಕ್ಷ್ಯದಲ್ಲಿ ಒಪ್ಪಿಕೊಂಡಿರುತ್ತಾರೆ. ಆದುದರಿಂದ, ನಿಶಾನೆ ಪಿ–1ರಲ್ಲಿ ವರದಕ್ಷಿಣೆಯ ಸಾವು ಎಂಬುವುದಕ್ಕೆ ಯಾವುದೇ ಸಾಕ್ಷ್ಯವಿಲ್ಲ ಎಂಬುವುದಾಗಿ ಧೃಡಪಡುತ್ತದೆ.

ನಿಶಾನೆ ಪಿ–1ರಲ್ಲಿ ಮೃತಳ ಮದುವೆಯ ಸಮಯದಲ್ಲಿ ಶಾಸ್ತ್ರೋಕ್ತವಾಗಿ ಮದುವೆ ಮಾಡಿದ್ದು ಮದುವೆ ಸಮಯ ಎಲ್ಲಾ ಖರ್ಚನ್ನು ಮಾಲಾಳ ತಂದೆ ತಾಯಿಯರೇ ವಹಿಸಿಕೊಂಡಿದ್ದೂ ಅವಳಿಗೆ ಒಡವೆಗಳು, ಗಂಡಿಗೆ ಉಂಗುರ, ವಾಚ್, ಕತ್ತಿನ ಚೈನು ಮತ್ತು ನಗದು 50,000/– ಇತ್ಯಾದಿ ಕೊಟ್ಟು ಮದುವೆ ಮಾಡಿದ್ದೆವು. ಮದುವೆಯ ನಂತರ ಮಾಲಾಳು ಗಂಡನ ಮನೆಯಲ್ಲೇ ವಾಸವಾಗಿದ್ದೂ 5,000/– ಎರಡು ಬಾರಿ ಮತ್ತು 1000/– ಒಂದು ಬಾರಿ ತನ್ನ ತಂದೆ ತಾಯಿಯವರಿಂದ ಪಡೆದುಕೊಂಡು ಬಂದ ಬಗ್ಗೆ ಮತ್ತು ತನ್ನ ಗಂಡನಿಗೆ ಸಾಲ ಇರುವುದಾಗಿ ತಿಳಿಸಿ ತನ್ನನ್ನು ತನ್ನ ತಂದೆಯಿಂದ ಹಣ ತರುವಂತೆ ಕಳುಹಿಸಿರುತ್ತಾರೆ ಅಂತ ತಿಳಿಸಿ ಹಣ ಪಡೆದು ಹೋಗಿದ್ದಳೆಂದೂ ಮತ್ತು ದಿನಾಂಕ 9–6–2005 ರಂದು ಮೃತಳ ತಾಯಿ ಮಂಜುಳ ಮಾಲಾಳ ಗಂಡನ ಮನೆಗೆದ ಬಂದಿದ್ದಾಗ ಗಂಡನಿಗೆ ಸಾಲಗಾರರು ಮನೆಯ ಬಳಿ ಗಲಾಟೆ ಮಾಡುತ್ತಿದ್ದಾರೆ 5,000/– ತನ್ನ ತಂದೆ ಮನೆಯಿಂದ ತೆಗೆದುಕೊಂಡು ಬಾ ಎಂದು ಪೀಡಿಸುತ್ತಿದ್ದಾರೆ ಅಂತ ತಿಳಿಸಿದ್ದರೆಂದೂ ಅದಕ್ಕೆ ಮೃತಳ ತಾಯಿ ಸ್ವಲ್ಪ ದಿನ ಕಾಲಾವಕಾಶಬೇಕು ನಂತರ ಕೊಡುತ್ತೇವೆ ಅಂತ ತಿಳಿಸಿ ಬಂದಿದ್ದಳು ಎಂಬ ವಿಷಯಗಳ ಪ್ರಸ್ತಾಪವಿದ್ದರೂ ಅದೂ ವರದಕ್ಷಿಣೆಯ ವ್ಯಾಖ್ಯೆಯಲ್ಲಿ ಬರುವ ಅಂಶಗಳಾಗಿರುವುದಿಲ್ಲ.

ನಿಶಾನೆ ಪಿ–1ರಲ್ಲಿರುವ ಈ ವಿಷಯಗಳನ್ನು ಗಮನಿಸಿದಾಗ ಮಾಲಾಳ ಗಂಡ ಅಥವಾ ಅವನ ಮನೆಯವರು ಮಾಲಾಳ ತಂದೆ ತಾಯಿಯವರಿಂದ ಉಂಗುರ, ವಾಚ್, ಕತ್ತಿನ ಚೈನು ಮತ್ತು ನಗದು 50,000/– ವನ್ನು ವರದಕ್ಷಿಣೆಯಾಗಿ ಕೇಳಿ ಪಡೆದು ಮದುವೆ ಮಾಡಿಕೊಂಡಿದ್ದನು ಎಂಬುವುದಾಗಿ ಕಂಡುಬರುವುದಿಲ್ಲ. ಹೆಣ್ಣಿನ ಕಡೆಯವರೇ ಶಾಸ್ತ್ರೋಕ್ತವಾಗಿ ತಮ್ಮ ಸ್ವ ಇಚ್ಛೆಯಿಂದ ಮಾಲಾಳ ಗಂಡನಿಗೆ ವರೋಪಚಾರವಾಗಿ ಚಿನ್ನಾಭರಣ ಮತ್ತು 50,000/– ವನ್ನು ಕೊಟ್ಟು ಮದುವೆ ಮಾಡಿದಂತೆ ಕಂಡುಬರುತ್ತದೆ. ಮಾಲಾ ಇವಳು ತನ್ನ ಗಂಡನಿಗೆ ಎರಡು ಬಾರಿ 5 ಸಾವಿರ ರೂಪಾಯಿಯಂತೆ ಮತ್ತು ಒಂದು ಬಾರಿ 1 ಸಾವಿರವನ್ನು ತನ್ನ ತಂದೆತಾಯಿಯವರಿಂದ ಪಡೆದು ಕೊಟ್ಟಿರುವುದು ಗಂಡನಿಗೆ ಸಾಲಗಾರರ ಕಾಟವನ್ನು ತಪ್ಪಿಸುವ ಸಲುವಾಗಿ ಆ ಹಣವನ್ನು ಕೊಟ್ಟಂತೆ ಕಂಡುಬರುತ್ತದೆ. ಅದೇ ರೀತಿಯಲ್ಲಿ ಮೃತಳ ತಾಯಿಯೂ ಕೂಡ 5 ಸಾವಿರ ರೂಪಾಯಿ ಕೊಡಲು ಉದ್ದೇಶಿಸಿದ್ದರೂ ಎಂಬುವುದು ವ್ಯಕ್ತವಾಗುತ್ತದೆ. ಏಕೆಂದರೆ, ಮೃತಳು ತನ್ನ ಗಂಡನು ಹಣವನ್ನು ತರುವ ಒತ್ತಾಯ ಒಡ್ಡಿದ್ದರಿಂದ ಅದನ್ನು ಪೂರೈಸಲು ಸಾಧ್ಯವಾಗದಿದ್ದ ಕಾರಣ ತನಗೆ ಗಂಡನ ಮನೆಯಲ್ಲಿ ವಾಸಿಸಲೂ ಸಾಧ್ಯವಿರಲಿಲ್ಲ

ಎಂಬುವುದಾಗಿ ಎಂದೂ ತನ್ನ ತಂದೆ ತಾಯಿಯವರೊಂದಿಗೆ ಮತ್ತು ಯಾರೊಂದಿಗೂ ಹೇಳಿಕೊಂಡಂತಹ ಸಾಕ್ಷ್ಯವು ಇರುವುದಿಲ್ಲ.

ಈ ಕಾರಣಗಳನ್ನು ಗಮನಿಸಿದಾಗ ನಿಶಾನೆ ಪಿ–1 ರಲ್ಲಿರುವ ವಿಷಯಗಳು ವರದಕ್ಷಿಣೆಯ ಸಾವಿಗೆ ಸಂಬಂಧಪಟ್ಟಂತಹ ಪ್ರಕರಣ ಅಲ್ಲ ಎಂಬುವುದು ಸ್ಪಷ್ಟವಾದ ವಿಚಾರ. ಆದ ಕಾರಣ ಈ ಪ್ರಕರಣದಲ್ಲಿ ಐಪಿಸಿಯ 498(ಎ) ಮತ್ತು 304(ಬಿ) ಸೆಕ್ಷನ್‌ಗಳನ್ನು ಅಳವಡಿಸುವ ಅಗತ್ಯವು ಆಪೊಅ ರವರುಗಳಿಗೆ ಕಂಡುಬರಲಿಲ್ಲ ಎಂಬುವುದು ಖಚಿತವಾಗುತ್ತದೆ. ಕಲಂ 174 ಸಿ.ಆರ್.ಪಿ.ಸಿ. ರ ಅನ್ವಯ ಪ್ರಕರಣವನ್ನು ದಾಖಲು ಮಾಡಿಕೊಂಡಿರುವುದು ಸರಿ ಇದೆ ಎಂಬುದು ತಿಳಿದುಬರುತ್ತದೆ.

ಪೊಲೀಸರು ಪಂಚನಾಮೆ ಮಾಡಲು ಆರೋಪಿ ಮಂಜುನಾಥ್ ಮನೆಗೆ ಹೋದಾಗ ಅವರ ಮನೆಗೆ ಬೀಗ ಹಾಕಿದ್ದರಿಂದ ಪಂಚನಾಮೆ ಮಾಡಲು ಸಾಧ್ಯವಾಗಲಿಲ್ಲ ಎಂಬ ಅಂಶವನ್ನು ಅಸ–1 ಶ್ರೀ ಚನ್ನಕೇಶವ ಮತ್ತು ಅಸ–2 ಶ್ರೀಮತಿ ಮಂಜುಳಾ ಇವರ ಹೇಳಿಕೆಯಿಂದ ಹೊರಪಟ್ಟಿರುತ್ತದೆ ಹಾಗೂ ಈ ಸಾಕ್ಷಿ ಕೂಡ ಪೊಲೀಸರೊಂದಿಗೆ ಆರೋಪಿ ಮನೆಗೆ ಹೋದಾಗ ಮನೆಗೆ ಬೀಗ ಹಾಕಿರುವುದು ನೋಡಿರುವುದಾಗಿ ಹೇಳಿರುತ್ತಾರೆ. ಈ ಸಾಕ್ಷಿಗಳು ಮೃತಳ ತಂದೆ ತಾಯಿಗಳಾಗಿದ್ದು ಇವರ ಸಾಕ್ಷ್ಯ ಮಹತ್ವದಾಗಿದ್ದು ಅಲ್ಲಗಳೆಯಲಾಗುವುದಿಲ್ಲ. ಈ ಸಾಕ್ಷ್ಯದಿಂದ ಆಪೊಅಗಳು ಕೃತ್ಯ ನಡೆದ ಸ್ಥಳಕ್ಕೆ ಬೇಟಿ ನೀಡಲ್ಲ ಎಂಬ ಆರೋಪವು ರುಜುವಾತಾಗಿರುವುದಿಲ್ಲ.

ನಿಶಾನೆ–ಡಿ–2 ಈ ಪ್ರಕರಣದಲ್ಲಿ ಅಪೋಅ–6 ರವರು ಬರೆದ ಜಿ.ಸಿ.ಆರ್ ಆಗಿರುತ್ತದೆ. ಇದರಲ್ಲಿ ಅಪೊಅಗಳು ಈ ಪ್ರಕರಣದಲ್ಲಿ ಕೈಗೊಂಡ ತನಿಖೆ ಕುರಿತು ವಿವರಣೆ ಇರುತ್ತದೆ. ಇದರ ಪ್ರಕಾರ ಮೃತಳು ನೇಣು ಹಾಕಿಕೊಳ್ಳಲು ಉಪಯೋಗಿಸಿದ ಸೀರೆಯನ್ನು ಅಮಾನತ್ತುಪಡಿಸಲಾಗಿರುತ್ತದೆ ಹಾಗೂ ಅಪೊಅ–6 ಇವರು ಅಸ–1 ಶ್ರೀ ಚನ್ನಕೇಶವ ಮತ್ತು ಅಸ–2 ಶ್ರೀಮತಿ ಮಂಜುಳಾ ಇವರುಗಳನ್ನು ವಿಚಾರಣೆಗೆ ಒಳಪಡಿಸಿರುವುದು ಹೊರಪಟ್ಟಿರುತ್ತದೆ. ಆದ್ದುದರಿಂದ ಸೀರೆ ಜಪ್ತಿ ಮಾಡಿಲ್ಲ, ರಕ್ತ ಸಂಬಂಧಿಗಳನ್ನು ವಿಚಾರಿಸಿಲ್ಲ ಎಂಬುದು ಕೂಡ ಸಾಬೀತಾಗಿರುವುದಿಲ್ಲ.

ಈ ಪ್ರಕರಣವು ದಾಖಲಾದಾಗಿನಿಂದ ಆರೋಪಿ ಹೆದರಿ ಓಡಿಹೋಗಿದ್ದು ಪೊಲೀಸರು ಹುಡುಕಾಡುತ್ತಿದ್ದಾಗ ತಾವುಗಳು ಸಹ ಅವರ ಜೊತೆಯಲ್ಲಿ ಆರೋಪಿಗಳ ಪತ್ತೆ ಕುರಿತು ಪೊಲೀಸರ ಜೊತೆಯಲ್ಲಿ ಓಡಾಡಿದ್ದು ಆರೋಪಿತರು ಸಿಕ್ಕಿರುವುದಿಲ್ಲ ಎಂಬುದಾಗಿ ಮೇಲ್ಕಂಡ ಇಬ್ಬರು ಸಾಕ್ಷಿಗಳು ನುಡಿದಿರುತ್ತಾರೆ. ಇದರಿಂದ ಪೊಲೀಸರು ಆರೋಪಿಗಳನ್ನು ಪತ್ತೆ ಮಾಡುವಲ್ಲಿ ವಿಫಲವಾಗಿರುತ್ತಾರೆ ಮತ್ತು ಆರೋಪಿತರು ತಪ್ಪಿಸಿಕೊಳ್ಳಲು ಸಹಾಯ ಮಾಡಿರುತ್ತಾರೆ ಮತ್ತು ವಿಳಂಬ ನೀತಿಯನ್ನು ಅನುಸರಿಸಿರುತ್ತಾರೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುತ್ತಾರೆ ಎಂಬ ಆಪಾದನೆ ಆಧಾರ ರಹಿತ ಅನ್ನಿಸಿಕೊಳ್ಳುತ್ತದೆ.

ಇಲಾಖಾ ವಿಚಾರಣೆಯ ಕಾಲದಲ್ಲಿ ಯಾವ ಅಭಿಯೋಗ ಸಾಕ್ಷಿಯೂ ಕೂಡ ಮಾಲಾಳ ಸಾವು ವರದಕ್ಷಿಣೆಯ ಸಾವು ಎಂಬ ಬಗ್ಗೆ ಸಾಕ್ಷ್ಯ ನೀಡಿರುವುದಿಲ್ಲ. ಮೃತಳ ತಂದೆ ಅಭಿಯೋಗ ಸಾಕ್ಷ–1 ಚನ್ನಕೇಶವ ಮತ್ತು ತಾಯಿ ಅಭಿಯೋಗ ಸಾಕ್ಷಿ–2 ಮಂಜುಳ ಇವರೂ ಕೂಡ ತಮ್ಮ ಮಗಳು ವರದಕ್ಷಿಣೆಯ ಸಾವಿಗೆ ತುತ್ತಾಗಿದ್ದಾಳೆ ಎಂಬುವುದಾಗಿ ಸಾಕ್ಷ್ಯ ನುಡಿದಿರುವುದಿಲ್ಲ. ಇವರ ಬಂದುಗಳು ಮತ್ತು ಅಕ್ಕಪಕ್ಕದವರಾದ ಅಭಿಯೋಗ ಸಾಕ್ಷಿ–3 ಶಾರದಮ್ಮ, ಅಭಿಯೋಗ ಸಾಕ್ಷಿ–4 ಹೆಚ್.ಎಸ್. ರಾಜಮ್ಮ, ಅಭಿಯೋಗ ಸಾಕ್ಷಿ–5 ಗೀತಾ, ಅಭಿಯೋಗ ಸಾಕ್ಷಿ–6 ಭಾರತಿ, ಅಭಿಯೋಗ ಸಾಕ್ಷಿ–7 ಎನ್. ನಾಗರಾಜ, ಅಭಿಯೋಗ ಸಾಕ್ಷಿ–8 ಗೌರಮ್ಮ, ಅಭಿಯೋಗ ಸಾಕ್ಷಿ–9 ವಿಶ್ವನಾಥ ಮತ್ತು ಅಭಿಯೋಗ ಸಾಕ್ಷಿ–10 ವಿ.ಸಿ. ರಾಜಣ್ಣ ಇವರಾರೂ ಕೂಡ ಮಾಲಾಳು ವರದಕ್ಷಿಣೆಯ ಕಿರುಕುಳದಿಂದ ಬೇಸರಗೊಂಡು ನೇಣು ಹಾಕಿಕೊಂಡು ಸತ್ತಿರುತ್ತಾಳೆ ಎಂದು ಸಾಕ್ಷ್ಯ ನುಡಿದಿರುವುದಿಲ್ಲ. ಇವರೆಲ್ಲರ ಸಾಕ್ಷ್ಯದ ಪ್ರಕಾರ ಮಾಲಾಳನ್ನು ಶಾಸ್ತ್ರೋಕ್ತವಾಗಿ ಪದ್ದತಿ ಪ್ರಕಾರ ಮದುವೆ ಮಾಡಿದ್ದೂ ಆಕೆಯು ಗಂಡನೊಂದಿಗೆ ಚೆನ್ನಾಗಿದ್ದುಕೊಂಡು ಅವಳಿಗೆ ಹೊಟ್ಟೆನೋವು ಮತ್ತು ಪೀಡೆ ಬಾದೆ ಇದ್ದುದರಿಂದ ವೈಟ್ ಫೀಲ್ಡ್ ನ ಡಾ. ರವೀಂದ್ರ ಇವರ ಬಳಿ ತೋರಿಸಿ ಚಿಕಿತ್ಸೆ ಕೊಡಿಸಲಾಗಿತ್ತು ಎಂಬುವುದಾಗಿ ಕಂಡುಬರುತ್ತದೆ. ಈ ಕಾರಣದಿಂದ ಆಕೆಯು ನೇಣು ಹಾಕಿಕೊಂಡು ಆತ್ಮಹತ್ಯೆ ಮಾಡಿಕೊಂಡಿರಬಹುದು ಎಂಬುವುದು ಅಭಿಯೋಗ ಸಾಕ್ಷಿಗಳ ಸಾಕ್ಷ್ಯದಿಂದ ಸ್ಪಷ್ಟವಾಗುತ್ತದೆ.

ದೊಡ್ಡಬಳ್ಳಾಪುರ ಉಪವಿಭಾಗದ ಮ್ಯಾಜಿಸ್ಟ್ರೇಟ್ ರವರು ಸಿಆರ್ ಪಿಸಿ ಯ ಸೆಕ್ಷನ್ 176(3) ಇದರ ಪ್ರಕಾರ ಮಾಲಾಳ ಸಾವು ಅವಳು ಮದುವೆಯದ 7 ವರ್ಷದ ಒಳಗೆ ಆಗಿದ್ದ ಕಾರಣ ಅವರು ಇಂತಹ ಪ್ರಕರಣದಲ್ಲಿ ಕಡ್ಡಾಯವಾಗಿ ವಿಚಾರಣೆ ಮಾಡುವ ಕರ್ತವ್ಯ ಹೊಂದಿದ್ದರಿಂದ ಅವರ ವಿಚಾರಣಾ ವರದಿಯನ್ನು ಆಪೊಅ–1, ಅಪೊ–ಅ–2 ಮತ್ತು ಅಪೊಅ–3 ಇವರುಗಳು ಕಾಯುತ್ತಿದ್ದುದ್ದಾಗಿ ಕಂಡುಬರುತ್ತದೆ.

ಆದರೆ, ದೊಡ್ಡಬಳ್ಳಾಪುರ ಉಪವಿಭಾಗದ ಮ್ಯಾಜಿಸ್ಟ್ರೇಟ್‌ರವರು ತಮ್ಮ ಕಡ್ಡಾಯದ ಕರ್ತವ್ಯವನ್ನು ದಿನಾಂಕ 15–6–2005 ರಿಂದ 1–7–2005ರವರೆಗೆ ನಿರ್ವಹಿಸದಿದ್ದ ಕಾರಣ ಆಪೊಅ–3 ಪೊಲೀಸ್ ಸಬ್‌ಇನ್ಸ್‌ಪೆಕ್ಟರ್ ಎಂ.ಎಸ್. ರಮೇಶ್ ರಾವ್ ಇವರು ದಿನಾಂಕ 1–7–2005 ರಂದು ಪತ್ರವೊಂದನ್ನು ಬರೆದು ಅವರನ್ನು ಕಾರ್ಯೋನ್ಮುಖರಾಗಿ

ಮಾಡಿ ಹೂತಿದ್ದ ಮಾಲಾಳ ಶವವನ್ನು ಹೊರತೆಗೆಯುವ ಕ್ರಮವನ್ನು ಕೈಗೊಂಡು ಅಭಿಯೋಗ ಸಾಕ್ಷಿ–11 ಇವರಿಂದ ಮಾಲಾಳ ಶವದ ವಿವಾರಣೆಯನ್ನು ಸಿಆರ್ ಪಿಸಿಯ ಸೆಕ್ಷನ್ 176(3)ರ ಪ್ರಕಾರ ನಡೆಸಿ ಅವರಿಂದ ನಿಶಾನೆ ಪಿ–4 ರಂತೆ ವರದಿಯನ್ನು ಪಡೆದುಕೊಂಡಿರುತ್ತಾರೆ.

ಅಭಿಯೋಗ ಸಾಕ್ಷಿ–11 ತಹಶೀಲ್ದಾರ್ ಚಿಕ್ಕಬೆಟ್ಟಯ್ಯ ಇವರು ಸಿಆರ್ ಪಿಸಿಯ 176(1) ರಲ್ಲಿ ಕಾಣಿಸಿರುವ ವಿಧಾನದಂತೆ ವಿಚಾರಣೆಯನ್ನು ನಡೆಸಿದಂತೆ ಕಾಣುವುದಿಲ್ಲ. ಏಕೆಂದರೆ, ಇಂತಹ ಪ್ರಕರಣಗಳಲ್ಲಿ ಎಕ್ಸಿಕ್ಯೂಟೀವ್ ಮ್ಯಾಜಿಸ್ಟ್ರೇಟ್ ರವರು ನಡೆಸುವ ವಿಚಾರಣೆಯು ನ್ಯಾಯಿಕ ನಡವಳಿ (ಜುಡಿಷಿಯಲ್ ಪ್ರೋಸಿಡಿಂಗ್ಸ್) ಆಗಿರುತ್ತದೆ. ಏಕೆಂದರೆ, ಅವರು ಇಂತಹ ಪ್ರಕರಣದಲ್ಲಿ ವಿಚಾರಣೆಯನ್ನು ಒಬ್ಬ ಮ್ಯಾಜಿಸ್ಟ್ರೇಟ್ ರವರು ಒಂದು ಅಪರಾಧವನ್ನು ವಿಚಾರಣೆ ನಡೆಸುವ ವಿಧಾನದಂತೆ ನಡೆಸಬೇಕಾಗಿದೆ. ಈ ಪ್ರಕರಣದಲ್ಲಿ ಅಭಿಯೋಗ ಸಾಕ್ಷಿ–11 ಇವರು ಈ ರೀತಿಯ ಕ್ರಮವನ್ನು ಕೈಗೊಂಡಿರುವುದಿಲ್ಲ. ಅದರ ಬದಲಾಗಿ ಪಂಚಾಯಿತಿದಾರರನ್ನು ಉಪಯೋಗಿಸಿಕೊಂಡು ವಿಚಾರಣೆ ನಡೆಸಿರುತ್ತಾರೆ. ಈ ರೀತಿಯ ವಿಚಾರಣೆಯು ಒಬ್ಬ ಮ್ಯಾಜಿಸ್ಟ್ರೇಟ್ ರವರು ಅಪರಾಧವನ್ನು ವಿಚಾರಣೆ ಮಾಡುವ ವಿಧಾನಕ್ಕೆ ವಿರುದ್ಧವಾಗಿದೆ.

ಪ್ರಚಲಿತದಲ್ಲಿರುವ ಪೊಲೀಸ್ ಪದ್ದತಿಯಂತೆ ಆಪೊಅ–3 ಇವರು ಕಾಡುಗೋಡಿ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ–194/2005 ಕಲಂ 498(ಎ), 304(ಬಿ) ಪ್ರಕರಣವನ್ನು ದಾಖಲಿಸಿ ವರದಕ್ಷಿಣೆಯ ಸಾವಿನ ಪ್ರಕರಣ ಎಂದು ಗುರುತಿಸಿ ಸಂಬಂಧಪಟ್ಟ ಉನ್ನತಾಧಿಕಾರಿಗಳಿಗೆ ಮತ್ತು ಸಿಓಡಿಗೆ ವರ್ತಮಾನವನ್ನು ಕೊಟ್ಟಿರುತ್ತಾರೆ. ನಿಶಾನೆ ಡಿ–1 ರಂತೆ ಸಿಓಡಿ ಅಧಿಕಾರಿಗಳು ಬಂದು ಈ ತನಿಖೆಯನ್ನು ತೆಗೆದುಕೊಳ್ಳುವವರೆಗೆ ಸ್ಥಳೀಯ ಪೊಲೀಸರೇ ತನಿಖೆಯನ್ನು ಮುಂದುವರಿಸಿ ಸ್ಥಳಕ್ಕೆ ಭೇಟಿ ಕೊಟ್ಟು ಈ ಪ್ರಕರಣದಲ್ಲಿ ಕೈಗೊಳ್ಳಬಹುದಾದಂತಹ ಎಲ್ಲಾ ಕ್ರಮಗಳನ್ನು ಆಪೊಅ ರವರುಗಳು ಜರುಗಿಸಿದ್ದರು. ನಂತರ ಈ ಪ್ರಕರಣದ ತನಿಖೆಯನ್ನು ಸಿಓಡಿಗೆ ವಹಿಸುವ ಸಲುವಾಗಿ ಆಪೊಅ–3 ಇವರು ಆಪೊಅ–5 ಪಿಐ ಎನ್.ಸಿ. ನಾಗರಾಜ ಮತ್ತು ಆಪೊಅ–6 ಡಿ.ವೈ.ಎಸ್ ಪಿ.ಕೆ.ಆರ್. ಸುರೇಂದ್ರರಾವ್ ಇವರ ಮುಖಾಂತರ ಪ್ರಕರಣದ ಕಡತವನ್ನು ಸಿಓಡಿಗೆ ವರ್ಗಾಯಿಸಿರುತ್ತಾರೆ.

ನಿಶಾನೆ ಡಿ–1 ರ ಪ್ರಕಾರ ವರದಕ್ಷಿಣೆಯ ಸಾವಿನ ಪ್ರಕರಣದ ತನಿಖೆಯನ್ನು ಸರಕಾರವು ಸಿಓಡಿಗೆ ವಹಿಸಿದೆ. ಕಾರಣವೇನೆಂದರೆ, ಸ್ಥಳೀಯ ಪೊಲೀಸರು ಹಲವಾರು ತರಹದ ಕರ್ತವ್ಯಗಳಲ್ಲಿ ಭಾಗಿಯಾಗುವ ಕಾರಣ ಅವರಿಗೆ ಸಮಯದ ಅಭಾವವಿರುವ ಕಾರಣ ವರದಕ್ಷಿಣೆಯ ಸಾವಿನ ಪ್ರಕರಣವನ್ನು ಕೂಲಂಕುಷವಾಗಿ ತನಿಖೆ ಮಾಡಲು ಸಹಜವಾಗಿ ಸಾಧ್ಯವಾಗುತ್ತಿಲ್ಲ ಎಂಬ ಕಾರಣದಿಂದ ಸಿಓಡಿಯವರಿಗೆ ಬೇರೆ ಯಾವುದೇ ಕರ್ತವ್ಯದ ಒತ್ತಡವಿಲ್ಲದೆ ಈ ಪ್ರಕರಣದ ತನಿಖೆಯನ್ನು ಉತ್ತಮ ಮಟ್ಟದಲ್ಲಿ ಮತ್ತು ಒಂದೇ ಘಟಕದವರಿಂದ ತನಿಖೆ ಮಾಡಿಸಲು ಅವಕಾಶವಿದ್ದ ಕಾರಣ ಸರಕಾರವು ವರದಕ್ಷಿಣೆಯ ಸಾವಿರ ಪ್ರಕರಣದ ತನಿಖೆಯನ್ನು ಸಿಓಡಿಗೆ ಒಪ್ಪಿಸಿದೆ. ನಿಶಾನೆ ಡಿ–1 ರಲ್ಲಿ ಕಾಣಿಸಿದಂತೆ ಸಿಓಡಿ ಅಧಿಕಾರಿಗಳು ಈ ಪ್ರಕರಣ ಅಂದರೆ ಮೊಕದ್ದಮೆ ಸಂಖ್ಯೆ–194/2005 ಕಲಂ 498(ಎ), 304(ಬಿ) ಪ್ರಕರಣವು ದಾಖಲಾದ ದಿನದಂದೆ ಅಂದರೆ ದಿನಾಂಕ 12–7–2005 ರಂದೇ ಈ ಪ್ರಕರಣದ ತನಿಖೆಯನ್ನು ಕೈಗೊಳ್ಳಬೇಕಾಗಿತ್ತು. ಏಕೆಂದರೆ, ಸಿಓಡಿಗೆ ಈ ಪ್ರಕರಣ ದಾಖಲಾದ ಬಗ್ಗೆ ಆ ದಿನವೇ ಪ್ರಥಮ ವರ್ತಮಾನದ ವರದಿಯಲ್ಲದೇ, ಜಿಲ್ಲಾ ಕಛೇರಿಯಿಂದಲೂ ಕೂಡ ಸುದ್ದಿ ಹೋಗಿತ್ತು. ಸಿಓಡಿಯವರು ತನಿಖೆಯನ್ನು ಕೈಗೆತ್ತಿಕೊಳ್ಳುವವರೆಗೆ ಸ್ಥಳೀಯ ಪೊಲೀಸರೇ ತನಿಖೆಯನ್ನು ಮುಂದುವರಿಸುವ ಕ್ರಮವಿದ್ದ ಕಾರಣ ಸ್ಥಳೀಯ ಪೊಲೀಸರೇ ಈ ಪ್ರಕರಣದ ತನಿಖೆಯನ್ನು ಮುಂದುವರಿಸಬೇಕಾಯಿತು. ಇದಲ್ಲದೆ, ನಿಶಾನೆ ಡಿ–1 ರ ಪ್ರಕಾರ ಸ್ಥಳೀಯ ಪೊಲೀಸರ ತನಿಖೆಯಲ್ಲಿ ಕಂಡುಬರುವ ಲೋಪದೋಷಗಳನ್ನು ಪತ್ತೆಮಾಡಿ ಅವರನ್ನು ಇಲಾಖಾ ದಂಡನೆಗೆ ಒಳಪಡಿಸಬೇಕೆಂಬ ಆದೇಶವು ಇರುವುದಿಲ್ಲ ಮತ್ತು ಇದರ ಬಗ್ಗೆ ಪ್ರತ್ಯೇಕವಾದ ಯಾವುದೇ ನಿರ್ದೇಶನಗಳು ಕೂಡ ಇರುವುದಿಲ್ಲ ಎಂಬುವುದಾಗಿ ಅಭಿಯೋಗ ಸಾಕ್ಷಿ–12 ಇವರು ತಮ್ಮ ಸಾಕ್ಷ್ಯದಲ್ಲಿ ಒಪ್ಪಿಕೊಂಡಿರುತ್ತಾರೆ. ಸ್ಥಳೀಯ ಪೊಲೀಸರು ಸಮಯದ ಅಭಾವದಿಂದ ವರದಕ್ಷಿಣೆಯ ಸಾವಿನ ತನಿಖೆಯನ್ನು ಸಮರ್ಪಕವಾಗಿ ಮಾಡಲು ಸಾಧ್ಯವಿಲ್ಲದಿದ್ದ ಕಾರಣ ಮತ್ತು ಸ್ಥಳೀಯ ಪೊಲೀಸರು ಮಾಡಿರುವ ಲೋಪದೊಷಗಳನ್ನು ಸರಿಪಡಿಸಿ ಅದನ್ನು ಕೂಲಂಕುಷವಾಗಿ ತನಿಖೆ ನಡೆಸುವ ಉದ್ದೇಶದಿಂದಲೇ ನಿಶಾನೆ ಡಿ–1 ರಂತೆ ವರದಕ್ಷಿಣೆಯ ಸಾವಿನ ತನಿಖೆಯನ್ನು ಸಿಓಡಿಗೆ ಒಪ್ಪಿಸಲಾಗಿದೆ.

ಇಲಾಖಾ ವಿಚಾರಣಾ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಒಇ 224 ಪೊಸಿಪ 2007, ಬೆಂಗಳೂರು ದಿನಾಂಕ 18ನೇ ಜುಲೈ 2008**

ಬೆಂಗಳೂರು ಜಿಲ್ಲೆ ಕಾಡುಗೋಡಿ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ–194/05 ಕಲಂ 498(ಎ), 304(ಬಿ) ಐಪಿಸಿ ತನಿಖೆಯಲ್ಲಿ ಲೋಪವೆಸಗಿದರೆನ್ನಲಾದ ಬಗ್ಗೆ ನಡೆಸಿದ ಇಲಾಖಾ ವಿಚಾರಣೆಯಲ್ಲಿ ಈ ಕೆಳಕಂಡ ಅಧಿಕಾರಿಗಳನ್ನು ಅವರ ಮೇಲೆ ಹೊರಿಸಲಾದ ದೋಷಾರೋಪಣೆಗಳಿಂದ ದೋಷಮುಕ್ತಗೊಳಿಸಿ ಆದೇಶಿಸಲಾಗಿದೆ.

(i) ಶ್ರೀ ಬಿ.ಟಿ. ಸತ್ಯನಾರಾಯಣ, ಎ.ಎಸ್.ಐ.
(ii) ಶ್ರೀ ಟಿ. ಶ್ರೀನಿವಾಸ ರೆಡ್ಡಿ, ಪಿ.ಎಸ್.ಐ. (ಕಾ & ಸು)
(iii) ಶ್ರೀ ಎಂ.ಎಸ್. ರಮೇಶ್‌ರಾವ್, ಪಿ.ಎಸ್.ಐ.
(iv) ಶ್ರೀ ಹೆಚ್.ಜೆ. ತಿಪ್ಪೇಸ್ವಾಮಿ, ಸಿ.ಪಿ.ಐ.
(v) ಶ್ರೀ ಎನ್.ಸಿ. ನಾಗರಾಜ್, ಸಿ.ಪಿ.ಐ. ಮತ್ತು
(vi) ಶ್ರೀ ಕೆ.ಆರ್. ಸುರೇಂದ್ರರಾವ್, ಡಿ.ವೈ.ಎಸ್.ಪಿ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1101

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಪ್ರವೀಣ್ ಬಾಬು, ಪಿ.ಎಸ್.ಐ. ಪಶ್ಚಿಮ ಠಾಣೆ, ರಾಯಚೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ರಾಯಚೂರು ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(3)ಪಿಆರ್: 10:2006 ಓ.ಬಿ.: 1623/2006 ದಿ:17–03–2006
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಅಪೀಲು/12/ಈವ/2007–08 ಅ.ಪ್ರ.ಸಂ:526 ಈವ 2007/4849 ದಿನಾಂಕ: 01–09–2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 24–10–2007.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)98: 2007–08 ದಿನಾಂಕ:17–01–2008.

**ಪ್ರಸ್ತಾವನೆ:–**

ಶ್ರೀ. ಪ್ರವೀಣ್ ಬಾಬು, ಪಿ.ಎಸ್.ಐ. ಪಶ್ಚಿಮ ಠಾಣೆ, ರಾಯಚೂರು ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:–**

2004 ಮತ್ತು 2005ನೇ ಸಾಲಿನಲ್ಲಿ ಸಿ.ಪಿ.ಐ. ಮಾನವಿ ವಲಯ ರವರು ಮಾನವಿ ಪೊಲೀಸ್ ಠಾಣೆಗೆ ಭೇಟಿ ಕೊಟ್ಟು ಸಂದರ್ಶನ ಪುಸ್ತಕದಲ್ಲಿ ಬರೆದ ಷರಾಗಳನ್ನು ಪಾಲನೆ ಮಾಡಿ ಪಾಲನಾ ವರದಿಯನ್ನು ಸಲ್ಲಿಸದೇ ಮೇಲಾಧಿಕಾರಿಗಳ ಆದೇಶ ಗಳನ್ನು ಉಲ್ಲಂಘನೆ ಮಾಡಿ ಕರ್ತವ್ಯದಲ್ಲಿ ನಿರ್ಲಕ್ಷ್ಯತನ ಪ್ರದರ್ಶಿಸಿದ ಬಗ್ಗೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ರಾಯಚೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 17–03–2006ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷಕಾಲ ಮುಂದೂಡುವ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 01–09–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶ್ರೀ. ಪ್ರವೀಣ್ ಬಾಬು, ಪಿ.ಎಸ್.ಐ., ಇವರು ಠಾಣಾಧಿಕಾರಿಗಳಿಗೆ ಸಂದರ್ಶನ ಪುಸ್ತಕದಲ್ಲಿ ಕೊಟ್ಟಿದ್ದ ಸೂಚನೆಗಳಿಗೆ ಅನುಪಾಲನಾ ವರಧಿಯನ್ನು ಸಲ್ಲಿಸುವಲ್ಲಿ ವಿಫಲರಾಗಿರುವುದು ಕಂಡುಬರುತ್ತದೆ. ಈ ಆರೋಪಕ್ಕಾಗಿ ಇವರಿಗೆ ಮುಂದಿನ

ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷಕಾಲ ಮುಂದೂಡಲಾಗಿದೆ. ಇವರು ಮೇಲ್ಮನವಿ ಪ್ರಾಧಿಕಾರಕ್ಕೆ ನೀಡಿರುವ ಕಾರಣಗಳು ಹಾಗೂ ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿಯಲ್ಲಿ ನೀಡಿರುವ ಕಾರಣಗಳು ಒಂದೇ ಆಗಿರುತ್ತವೆ. ಆದ್ದರಿಂದ ಇವರು ಪರಿಷ್ಕರಣಾ ಮೇಲ್ಮನವಿಯಲ್ಲಿ ಯಾವುದೇ ಹೊಸ ಅಂಶಗಳು ಅಥವಾ ಬಲವಾದ ಸಮರ್ಥನೆಯನ್ನು ಒದಗಿಸಿರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 57 ಪೊಸಿಅ 2008 ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ. ಪ್ರವೀಣ್ ಬಾಬು, ಪಿ.ಎಸ್.ಐ. ಪಶ್ಚಿಮ ಠಾಣೆ, ರಾಯಚೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1442

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಶರಣಬಸಪ್ಪ, ಎಪಿಸಿ–272, ಡಿ.ಎ.ಆರ್., ಗುಲ್ಬರ್ಗಾ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಪಿಆರ್: 26:07 ಓಬಿ:562:07 ದಿನಾಂಕ:11–04–2007.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಅಪೀಲು 53: ಈವ: 07 ದಿನಾಂಕ: 26–06–2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 08–08–2007.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)66: 07–08 ದಿನಾಂಕ: 27–02–2008.

**ಪ್ರಸ್ತಾವನೆ:**

ಶ್ರೀ. ಶರಣಬಸಪ್ಪ, ಎಪಿಸಿ–272, ಡಿ.ಎ.ಆರ್., ಗುಲ್ಬರ್ಗಾ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಶ್ರೀ. ಶರಣಬಸಪ್ಪ, ಎಪಿಸಿ–272, ಡಿ.ಎ.ಆರ್., ಗುಲ್ಬರ್ಗಾ ಜಿಲ್ಲೆ, ರವರು ದಿನಾಂಕ: 05–11–2006 ರಿಂದ 04–02–2007 ರವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ನಿರ್ಲಕ್ಷ್ಯತನ ತೋರಿಸಿದ್ದೀರಿ ಎಂದು ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 11–04–2007ರ ಆದೇಶದಲ್ಲಿ ಅರ್ಜಿದಾರರ ದಿನಾಂಕ: 05–11–2006 ರಿಂದ 04–02–2007 ರವರೆಗಿನ ಅನಧಿಕೃತ ಗೈರುಹಾಜರಿಯನ್ನು ಸಂಬಳರಹಿತ ರಜೆ ಮತ್ತು ವಾರ್ಷಿಕ ವೇತನದ ಮುಂದಿನ ವಾರ್ಷಿಕ ವೇತನಕ್ಕೆ ಪರಿಣಾಮ ಬೀರದಂತೆ ಆರು ತಿಂಗಳ ಕಾಲ ಮುಂದೂಡಿದ ದಂಡನೆ ವಿಧಿಸಿರುತ್ತಾರೆ .

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 26–06–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅಪೀಲುದಾರರು ದಿ: 02–11–2006 ರಿಂದ 04–11–2006ರ ವರೆಗೆ ಆಕಸ್ಮಿಕ ರಜೆಯ ಮೇಲೆ ಹೋಗಿದ್ದು ದಿ: 05–11–2006ರಂದು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳಬೇಕಾಗಿತ್ತು. ಹಠಾತ್ತಾಗಿ ಕಾಯಿಲೆಗೆ ತುತ್ತಾದ ಕಾರಣ ಸದರಿ ದಿನಾಂಕದಂದು ವರದಿ ಮಾಡಿಕೊಳ್ಳಲು ಸಾಧ್ಯವಾಗಲಿಲ್ಲ ವೈದ್ಯರಲ್ಲಿ ತೋರಿಸಿದಾಗ ಕಾಮಾಲೆ ಮತ್ತು ಎದೆ ನೋವು ಕಂಡು ಬಂದಿದ್ದು, ವೈದ್ಯರ ಸಲಹೆ ಮೇರೆಗೆ ವಿಶ್ರಾಂತಿ ಪಡೆಯಬೇಕಾಯಿತು, ಎಂದು ತಮ್ಮ ಅರ್ಜಿಯಲ್ಲಿ ತಿಳಿಸಿರುತ್ತಾರೆ. ಸದರಿ ಅಪೀಲುದಾರರು ಸಲ್ಲಿಸಿದ ವೈದ್ಯಕೀಯ ಪ್ರಮಾಣ ಪತ್ರ ಪರಿಶೀಲಿಸಿದಾಗ ದಿ: 04–11–2006 ರಂದು ಪ್ರಾಥಮಿಕ ಆರೋಗ್ಯ ಕೇಂದ್ರ, ನೆಲೋಗಿಯಲ್ಲಿ ತೋರಿಸಿದ್ದು ಇದೆ. ವೈದ್ಯಕೀಯ ಪ್ರಮಾಣ ಪತ್ರ ಉಪಚಾರ ಪಡೆದ ದಿನಾಂಕ: 04–11–2006 ರಿಂದ 13–11–2006ರ ವರೆಗೆ, ದಿ: 13–11–2006 ರಿಂದ 12–12–2006ರ ವರೆಗೆ ದಿ: 14–12–2006 ರಿಂದ 23–01–2007ರ ವರೆಗೆ ದಿ: 24–01–2007 ರಿಂದ 04–02–2007ರ ವರೆಗೆ ಉಪಚಾರ ಪಡೆದುಕೊಂಡ ವೈದ್ಯಕೀಯ ಪ್ರಮಾಣ ಪತ್ರ ಸಲ್ಲಿಸಿರುತ್ತಾರೆ. ಸದರಿ ವೈದ್ಯಕೀಯ ಪ್ರಮಾಣ ಪತ್ರ ಪರಿಶೀಲಿಸಿದ್ದು, ಅಪೀಲುದಾರರು ತಮ್ಮ ಅರ್ಜಿಯಲ್ಲಿ ದಿ: 05–11–2006 ರಂದು ವೈದ್ಯರಲ್ಲಿ ತೋರಿಸಿದ್ದು ಎಂದು ತಿಳಿಸಿದ್ದು ಆದರೆ ವೈದ್ಯಕೀಯ ಪ್ರಮಾಣ ಪತ್ರದಲ್ಲಿ ದಿ: 04–11–2006 ರಂದು ತೋರಿಸಿದ್ದು ಇರುತ್ತದೆ ಮತ್ತು ದಿ: 13–12–2006 ರಂದು ಉಪಚಾರ ಪಡೆದುಕೊಂಡ ಬಗ್ಗೆ ವೈದ್ಯಕೀಯ ಪ್ರಮಾಣ ಪತ್ರದಲ್ಲಿ ತೆಗೆದುಕೊಂಡಂತಹ ಯಾವುದೇ ದಾಖಲಾತಿಗಳು ಸಲ್ಲಿಸಿರುವುದಿಲ್ಲ. ಅಪೀಲುದಾರರು ತುರ್ತು ಚಿಕಿತ್ಸೆ ಪಡೆದುಕೊಂಡು ಕೇಂದ್ರ ಸ್ಥಾನಕ್ಕೆ ಬಂದು ಎಂ.ಹೆಚ್.ಎಸ್. ಪಡೆದುಕೊಂಡು ಉಪಚಾರ ಕುರಿತು ಹೋಗ ಬಹುದಾಗಿತ್ತು. ಪುರಸ್ಕರಿಸಲು ಸಕಾರಣಗಳು ಇರುವುದಿಲ್ಲ, ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 380 ಪೊಸಿಅ 2008 ಬೆಂಗಳೂರು, ದಿನಾಂಕ: 04ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ. ಶರಣಬಸಪ್ಪ, ಎಪಿಸಿ–272, ಡಿ.ಎ.ಆರ್., ಗುಲ್ಬರ್ಗಾ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1223

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಬಿ.ಎನ್. ಅಂಬಿಗೇರ, ಪಿ.ಎಸ್.ಐ., ಹಲಗೇರಿ ಪೊಲೀಸ್ ಠಾಣೆ, ಹಾವೇರಿ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಆರಕ್ಷಕಾಧಿಕಾರಿ, ಧಾರವಾಡ ಇವರ ಆದೇಶ ಸಂಖ್ಯೆ: ಸಿಬ್ಬಂದಿ–6: ಸಿಆರ್–70: 2006–07 ಆಪುಸಂ:11/05–06 ದಿನಾಂಕ: 04–04–2005
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಹಿಂಬರಹ ಸಂಖ್ಯೆ:ಅಪೀಲು 146:ಉವ:07 ದಿನಾಂಕ:14–05–2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:29–06–2007
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)53:07–08 ದಿನಾಂಕ:29–06–2007

**ಪ್ರಸ್ತಾವನೆ:**

ಶ್ರೀ. ಬಿ.ಎನ್. ಅಂಬಿಗೇರ, ಪಿ.ಎಸ್.ಐ., ಹಲಗೇರಿ ಪೊಲೀಸ್ ಠಾಣೆ, ಹಾವೇರಿ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಶ್ರೀ. ಬಿ.ಎನ್. ಅಂಬಿಗೇರ, ಪಿ.ಎಸ್.ಐ., ಧಾರವಾಡ ಗ್ರಾಮೀಣ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ ಗುನ್ನಾ ಸಂ.179/–03 ಪ್ರಕರಣದ ತನಿಕಾಧಿಕಾರಿಯಾಗಿದ್ದ ಸಮಯದಲ್ಲಿ ಚವಕಸಿಯಲ್ಲಿದ್ದ ನ್ಯಾಯಾಲಯದ ಪ್ರಕರಣಕ್ಕೆ ಸಾಕ್ಷಿಯಾಗಿ ಹಾಜರಾಗಲು ಸಾಕಷ್ಟು ಕಾಲಾವಕಾಶ ನೀಡಿದ್ದರು ನ್ಯಾಯಾಲಯಕ್ಕೆ ಹಾಜರಾಗಿ ಸಾಕ್ಷಿ ನುಡಿಯುವಲ್ಲಿ

ವಿಫಲರಾಗಿದ್ದು, ನಿಮ್ಮ ಕರ್ತವ್ಯದಲ್ಲಿ ಖಂಡನೀಯ ಬೇಜವಾಬ್ದಾರಿತನ, ನಿರ್ಲಕ್ಷ್ಯತನ ತೋರಿ ನ್ಯಾಯಾಲಯದ ಆದೇಶ ಉಲ್ಲಂಘನೆ ಮಾಡಿರುವಿರಿ ಎಂದು ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಆರಕ್ಷಕಾಧಿಕಾರಿ, ಧಾರವಾಡ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 04–04–2005ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ ಒಂದು ವರ್ಷ ಮುಂದೂಡಿದ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲ್ಮನವಿಯನ್ನು 2.3 ವರ್ಷ ವಿಳಂಬವಾಗಿ ಸಲ್ಲಿಸಿರುವುದರಿಂದ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 14–05–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶ್ರೀ.ಬಿ.ಎನ್.ಅಂಬಿಗೇರ, ಪಿ.ಎಸ್.ಐ., ಇವರು ಧಾರವಾಡ ಗ್ರಾಮೀಣ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕೆ.ಸಿ.ಸಿ. ಬ್ಯಾಂಕ್, ಅಣ್ಣಿಗೇರಿ ವ್ಯವಸ್ಥಾಪಕರು ಬ್ಯಾಂಕಿನ ಸುರಕ್ಷತೆ ಸಲುವಾಗಿ ಬಂದೂಕಿನ ಲೈಸೆನ್ಸ್ ಮಂಜೂರು ಮಾಡಬೇಕೆಂದು ಸಲ್ಲಿಸಿದ್ದ ಅರ್ಜಿಯ ಸಂಬಂಧ, ಸ್ಥಳಕ್ಕೆ ಹೋಗಿ ಪರಿಶೀಲಿಸಿ, ವಿಚಾರಣಾ ವರದಿಯನ್ನು ಕಳುಹಿಸದೇ ಸದರಿ ಬ್ಯಾಂಕಿಗೆ ಗನ್ ಲೈಸೆನ್ಸ್ ಅಗತ್ಯವಿಲ್ಲ ಎಂದು ವರದಿ ಕಳುಹಿಸಿದ ಆರೋಪದ ಮೇಲೆ ಶ್ರೀಯುತರ ವಿರುದ್ಧ ಮಾಡಲಾಗಿರುವ ಆರೋಪಗಳು ಸಾಬೀತಾದ ಕಾರಣ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು without Cumulative effect ಒಂದು ವರ್ಷದ ಅವಧಿಗೆ ತಡೆಹಿಡಿಯುವಂತೆ ದಂಡನೆಯನ್ನು ವಿಧಿಸಲಾಗಿದೆ.

ಪರಿಷ್ಕರಣ ಮೇಲ್ಮನವಿಯಲ್ಲಿ ತಾವು ಕೆ.ಸಿ.ಸಿ. ಬ್ಯಾಂಕಿನ ಗನ್ ಲೈಸೆನ್ಸ್ ನೀಡುವ ಬಗ್ಗೆ ಸ್ಥಳ ಪರಿಶೀಲನೆ ಮಾಡಬೇಕಾಗಿದ್ದುದರಿಂದ ತಾವು ಎರಡು ಬಾರಿ ಬ್ಯಾಂಕಿಗೆ ಭೇಟಿ ಕೊಟ್ಟು ವ್ಯವಸ್ಥಾಪಕರನ್ನು ಸಂಪರ್ಕಿಸಿ, ಬ್ಯಾಂಕಿನ ವ್ಯವಹಾರದ ಮಾಹಿತಿಯೊಂದಿಗೆ ಹೇಳಿಕೆ ನೀಡಲು ಠಾಣೆಗೆ ಬರಬೇಕೆಂದೂ ಬಾರದಿದ್ದಲ್ಲಿ ಬಂದೂಕು ಲೈಸೆನ್ಸ್ ಬ್ಯಾಂಕಿಗೆ ಅಗತ್ಯವಿಲ್ಲವೆಂದು ಭಾವಿಸಿ, ಅದರಂತೆ ತಾವು ವರದಿ ಸಲ್ಲಿಸುವುದಾಗಿ, ವ್ಯವಸ್ಥಾಪಕರಿಗೆ ತಿಳಿಸಿದ್ದಾಗಿ ತಮ್ಮ ಕರ್ತವ್ಯವನ್ನು ಸಮರ್ಥಿಸಿ ಕೊಂಡಿದ್ದಾರೆ. ಮುಂದುವರಿದು, ವ್ಯವಸ್ಥಾಪಕರು ಠಾಣೆಗೆ ಭೇಟಿ ನೀಡದೇ ಇದ್ದ ಕಾರಣ ಲೈಸೆನ್ಸ್ ಅಗತ್ಯವಿಲ್ಲವೆಂದು ತಾವು ವರದಿ ಸಲ್ಲಿಸಿದ್ದಾಗಿಯೂ ತಮ್ಮ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ತಿಳಿಸಿದ್ದು, ಆರೋಪಿತರು ಕೆ.ಸಿ.ಸಿ. ಬ್ಯಾಂಕಿನ ವ್ಯವಸ್ಥಾಪಕರೊಡನೆ ಪತ್ರ ವ್ಯವಹಾರ ನಡೆಸಿರುವುದಕ್ಕಾಗಲಿ, ದೂರವಾಣಿ ಮೂಲಕ ಸಂಪರ್ಕ ಪರಿಶೀಲಿಸಿದ್ದಕ್ಕಾಗಲಿ ಯವುದೇ ದಾಖಲೆ ಗಳನ್ನು ಒದಗಿಸಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಇವರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಲು ಯಾವುದೇ ಸಮರ್ಥನೆ ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 374 ಪೊಸಿಅ 2007 ಬೆಂಗಳೂರು, ದಿನಾಂಕ: 07ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ. ಬಿ.ಎನ್. ಅಂಬಿಗೇರ, ಪಿ.ಎಸ್.ಐ., ಹಲಗೇರಿ ಪೊಲೀಸ್ ಠಾಣೆ, ಹಾವೇರಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1222

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಎಂ.ಜಿ. ಸತ್ಯನಾರಾಯಣರಾವ್, ಪಿ.ಎಸ್.ಐ., ಆಳಂದ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಇವಿ:3:ಈವ: 710:ಆಮಸ:222:ಈವ:07 ದಿನಾಂಕ: 24–03–2007.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು: (6)28:2007–08 ಓಬಿ:ಸಂ:44: 07–08 ದಿನಾಂಕ: 22–08–2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:10–01–2008.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು:(2)25:2007–08 ದಿನಾಂಕ:01–04–2008

**ಪ್ರಸ್ತಾವನೆ:**

ಶ್ರೀ. ಎಂ.ಜಿ. ಸತ್ಯನಾರಾಯಣರಾವ್, ಪಿ.ಎಸ್.ಐ., ಅಳಂದ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಶ್ರೀ. ಎಂ.ಜಿ. ಸತ್ಯನಾರಾಯಣರಾವ್, ಪಿ.ಎಸ್.ಐ., ರವರಾದ ನೀವು ನಿಮ್ಮ ಸಿಬ್ಬಂದಿಯವರಾದ ಲಾಲ್ ಅಹ್ಮದ್, ಪಿಸಿ–560, ಶ್ರೀ. ನಾಗಪ್ಪ ಪಿಸಿ–599 & ಶ್ರೀ. ಜೆ. ಹನುಮಂತ, ಪಿಸಿ–231, ರವರೇ ನೀವು ಸಿಂದನೂರು ಗ್ರಾಮೀಣ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಾಗ ಊರಿನ ಸಾರ್ವಜನಿಕರ ಮುಂದೆ ಶ್ರೀ. ಶ್ಯಾಮಣ್ಣನವರೊಂದಿಗೆ ಅನುಚಿತವಾಗಿ ನಡೆದುಕೊಂಡು, ಅವರಿಗೆ ಹೊಡಿಬಡಿ ಮಾಡಿದ್ದು, ಶ್ಯಾಮಣ್ಣ ಮೃತಪಡಲು ಕಾರಣರಾಗಿದ್ದರಿಂದ ನಿಮ್ಮ ವಿರುದ್ಧ ಸಿಂದನೂರು ನಗರ ಠಾಣೆ, ಗುನ್ನೆ ನಂ: 122/2004 ಕಲಂ 302, 504, ಸಂ: 34 ಐಪಿಸಿ ಪ್ರಕಾರ ಪ್ರಕರಣವು ದಾಖಲಾದ್ದರಿಂದ ನಿಮ್ಮನ್ನು ದಿ:04–11–2004 ರಂದು ಅಮಾನತ್ತಿನಲ್ಲಿರಿಸಿದ್ದು, ಆ ದಿನಾಂಕದಿಂದ ಕೇಂದ್ರ ಸ್ಥಾನದಿಂದ ಪರಾರಿಯಿದ್ದು, ನಿಯಮ ಉಲ್ಲಂಘಿಸಿದ ಬಗ್ಗೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 24–03–2007ರ ಆದೇಶದಲ್ಲಿ ಅರ್ಜಿದಾರರ ವೇತನದ ಒಂದು ಹಂತವನ್ನು ಒಂದು ವರ್ಷ ಕಾಲ ಇಳಿಸಿ (ಸದರಿ ಅವಧಿಯಲ್ಲಿ ಆಪಾದಿತರು ಯಾವುದೇ ವಾರ್ಷಿಕ ಮುಂಬಡ್ತಿಗೆ ಅರ್ಹರಿರುವುದಿಲ್ಲ) ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ನಿರೀಕ್ಷಕರು, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 22–08–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಸಿಂಧನೂರು ಗ್ರಾಮೀಣ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಾಗ ಸಾರ್ವಜನಿಕರ ಮುಂದೆ ಶಾಮಣ್ಣನೊಂದಿಗೆ ಅನುಚಿತವಾಗಿ ನಡೆದುಕೊಂಡು ಅವರಿಗೆ ಹೊಡೆಬಡೆ ಮಾಡಿ, ಶಾಮಣ್ಣನು ಮೃತ ಪಡಲು ಕಾರಣರಾಗಿದ್ದರಿಂದ ಆಪಾದಿತರ ವಿರುದ್ದ ಸಿಂಧನೂರು ನಗರ ಠಾಣೆಯಲ್ಲಿ ಗುನ್ನೆ ನಂ. 122/04, ಕಲಂ, 302, 504, ಸಂ.34 ಐಪಿಸಿ ಅಡಿಯಲ್ಲಿ ಪ್ರಕರಣವು ದಿನಾಂಕ: 04–11–2004 ರಂದು ದಾಖಲಾಗಿದ್ದರಿಂದ ಅಂದೇ ಆಪಾದಿತರನ್ನು ಅಮಾನತ್ತಿನಲ್ಲಿಡಲಾಗಿದೆ. ಈ ಸಂಬಂಧದಲ್ಲಿ ಅವರನ್ನು ಕೇಂದ್ರಸ್ಥಾನ ಬಿಟ್ಟು ಹೋಗದಂತೆ ಅಮಾನತ್ತಿನ ಅವಧಿಯಲ್ಲಿ ದಿನಾಲು ಡಿ.ಎಸ್.ಪಿ. ಸಿಂಧನೂರ ಇವರ ಕಛೇರಿಯಲ್ಲಿ ಹಾಜರಿ ಕೊಡುವಂತೆ ಸೂಚಿಸಿದ್ದರೂ, ಸದರಿಯವರು ಈ ರೀತಿಯಾಗಿ ಆದೇಶವನ್ನು ಪಾಲನೆ ಮಾಡದೆ, ಮೇಲಧಿಕಾರಿಯವರಿಂದ ಪೂರ್ವಾನುಮತಿಯನ್ನು ಪಡೆಯದೇ ಕೇಂದ್ರ ಸ್ಥಾನವನ್ನು ಬಿಟ್ಟು ಹೋಗಿರುವುದರಿಂದ ಇವರ ವಿರುದ್ದ ನಿಯಮ 6 ರ ಅಡಿಯಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿದ್ದು, ಅದರಂತೆ ವಿಚಾರಣಾಧಿಕಾರಿಯವರು ಆಪಾದಿತರ ವಿರುದ್ದ ದೋಷಾರೋಪಣೆ ಪತ್ರ ರಚಿಸಿರುವುದು ಸಮರ್ಥನೀಯವಾಗಿರುತ್ತದೆ. ಆದ್ದರಿಂದ ಅಪೀಲುದಾರರ ವಾದದಲ್ಲಿ ಯಾವುದೇ ಹುರುಳಿಲ್ಲ. ಅಪೀಲುದಾರರು ಅಮಾನತ್ತಿನ ಅವಧಿಯಲ್ಲಿ ಯಾವುದೇ ಪೂರ್ವಾನುಮತಿ ಪಡೆಯದೇ ಕೇಂದ್ರ ಸ್ಥಾನದಿಂದ ಅನಧಿಕೃತವಾಗಿ ಗೈರು ಹಾಜರಿದ್ದ ಬಗ್ಗೆ ಅಭಿಯೋಗ ಪರ ದಾಖಲಾತಿಗಳಾದ ಎಕ್ಸ್ ಪಿ–4, ಎಕ್ಸ್ ಪಿ–2, ಎಕ್ಸ್ ಪಿ–3 (ಎ), ಎಕ್ಸ್ ಪಿ–1, ಎಕ್ಸ್ ಪಿ–1 (ಎ) ಹಾಗೂ ಎಕ್ಸ್ ಪಿ–6, ಗಳ ಆಧಾರದ ಮೇಲಿಂದ ಅಪೀಲುದಾರರು ಕೇಂದ್ರ ಸ್ಥಾನದಲ್ಲಿರಲಿಲ್ಲ ಎಂಬ ಅಂಶವು ನಿಖರವಾಗಿ ಕಂಡುಬರುತ್ತದೆ. ಆದ್ದರಿಂದ ಇದನ್ನು ತಳ್ಳಿಹಾಕುವಂತಿಲ್ಲ. ಇವರ ವಾದದಲ್ಲಿ ಹುರುಳಿಲ್ಲ, ಏಕೆಂದರೆ ಅಪೀಲುದಾರರೊಬ್ಬ ಜವಾಬ್ದಾರಿಯುತ ಪೊಲೀಸ್

ಅಧಿಕಾರಿಯಾಗಿದ್ದು, ಅವರಿಗೆ ಅಮಾನತ್ತಿನಲ್ಲಿರಿಸಿ ಆದೇಶದ ಪ್ರತಿಯಲ್ಲಿ ಸೂಚಿಸಿರುವಂತೆ ಒಂದು ವೇಳೆ ಕೇಂದ್ರಸ್ಥಾನ ಬಿಡಬೇಕಾದರೆ ತಕ್ಷಮ ಅಧಿಕಾರಿಯವರಿಂದ ಪೂರ್ವಾನುಮತಿ ಪಡೆದು ಕೇಂದ್ರಸ್ಥಾನ ಬಿಡಬೇಕೆಂಬ ಮಾಹಿತಿ ಗೊತ್ತಿದ್ದರೂ ತಾನು ಇಲಾಖಾ ವಿಚಾರಣೆಗೆ ಹಾಜರಾಗಬೇಕಾದಲ್ಲಿ ತಕ್ಷಮ ಪ್ರಾಧಿಕಾರಿಯವರಿಂದ ಪೂರ್ವಾನುಮತಿ ಪಡೆದು ಕೇಂದ್ರಸ್ಥಾನ ಬಿಡಬೇಕಾಗಿತ್ತು. ಆದರೆ ಹಾಗೆ ಮಾಡದೆ ತಮ್ಮಿಷ್ಟ ಬಂದಂತೆ ಅನಧಿಕೃತವಾಗಿ ಕೇಂದ್ರಸ್ಥಾನ ಬಿಟ್ಟು ಹೋಗಿರುತ್ತಾರೆ. ಆದ್ದರಿಂದ ಸದರಿಯವರು ಮೇಲಧಿಕಾರಿಯವರ ಆದೇಶವನ್ನು ಪಾಲಿಸುವಲ್ಲಿ ವಿಫಲರಾಗಿರುತ್ತಾರೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 133 ಪೊಸಿಅ 2008 ಬೆಂಗಳೂರು, ದಿನಾಂಕ: 22ನೇ ಜುಲೈ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ. ಎಂ.ಜಿ. ಸತ್ಯನಾರಾಯಣರಾವ್, ಪಿ.ಎಸ್.ಐ., ಅಳಂದ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1134

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಪಿ. ಧರಣೇಶಪ್ಪ, ಸಿಪಿಸಿ–1001, ಅಬ್ಬಿನಹೊಳೆ ಪೊಲೀಸ್ ಠಾಣೆ, ಚಿತ್ರದುರ್ಗ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿತ್ರದುರ್ಗ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ:(1):ಇವಿ:07:2004–05 ಓಬಿ:70:04–05 ದಿನಾಂಕ: 01–06–2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ: 23: ಅಪೀಲು: ಸಿಬ್ಬಂದಿ:2: 2005–06 ಓಬಿ:68: 2007–08 ದಿನಾಂಕ: 30–06–2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 10–01–2008.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು:(2):134: 07–08 ದಿನಾಂಕ: 17–04–2008

**ಪ್ರಸ್ತಾವನೆ:**

ಶ್ರೀ. ಪಿ. ಧರಣೇಶಪ್ಪ, ಸಿಪಿಸಿ–1001, ಅಬ್ಬಿನಹೊಳೆ ಪೊಲೀಸ್ ಠಾಣೆ, ಚಿತ್ರದುರ್ಗ ಜಿಲ್ಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1. ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಒಬ್ಬ ಜವಾಬ್ದಾರಿಯುತ ಪೊಲೀಸ್ ಸಿಬ್ಬಂದಿಯಾಗಿ, ದಿ: 05–12–2004ರಂದು ರಾತ್ರಿ ಸುಮಾರು 9–00 ಘಂಟೆ ಸಮಯದಲ್ಲಿ ಕುಡಿದು ಪಾನಮತ್ತರಾಗಿ, ಅಬ್ಬಿನಹೊಳೆ ಪೊಲೀಸ್ ವಸತಿ ಗೃಹ ಮುಂಭಾಗ ಸಾರ್ವಜನಿಕ ಸ್ಥಳದಲ್ಲಿ ಸಾರ್ವಜನಿಕರ ಎದುರಿಗೆ ಅದೇ ಪೊಲೀಸ್ ಠಾಣೆಯ ಪಿ.ಸಿ.–1024, ರಮೇಶಾಚಾರಿ ಎಂಬುವವರ ಪತ್ನಿಗೆ ಅವಾಚ್ಯ ಶಬ್ದಗಳಿಂದ ನಿಂದಿಸಿ ಬೈದಾಡಿದ್ದು, ಇದನ್ನು ಪಿ.ಎಸ್.ಐ. ರವರಿಗೆ ತಿಳಿಸಲು ಹೋದ ಪಿ.ಸಿ.–1024 ರವರೆಗೂ ಸಹ ಬೈದು ಅಸಭ್ಯ ರೀತಿಯಿಂದ ವರ್ತಿಸಿದ ಬಗ್ಗೆ.
2. ಅದೇ ದಿನ, ಅದೇ ಸಮಯದಲ್ಲಿ ಕುಡಿದು ಪಾನಮತ್ತರಾಗಿ, ಠಾಣೆಯ ಮುಂಭಾಗದ ರಸ್ತೆಯಲ್ಲಿ ಸಾರ್ವಜನಿಕ ಸ್ಥಳದಲ್ಲಿ ಸಾರ್ವಜನಿಕರ ಎದುರಿಗೆ ಶ್ರೀಮತಿ.ನೀಲಮ್ಮ ಕೋಂ ತಿಪ್ಪೇಸ್ವಾಮಿ ಎಂಬುವವರಿಗೆ ಅವಾಚ್ಯ ಶಬ್ದಗಳಿಂದ ನಿಂದಿಸಿ, ಅಬ್ಬಿನಹೊಳೆ ಪೊಲೀಸ್ ಠಾಣೆ, ಎನ್.ಸಿ.ನಂ: 84/2004ರಲ್ಲಿ ದೂರು ದಾಖಲಾಗಲು ಕಾರಣರಾಗಿ ಇಲಾಖೆಯ ಘನತೆ ಗೌರವಗಳಿಗೆ ಧಕ್ಕೆ ಬರುವಂತೆ ವರ್ತಿಸಿ ಕರ್ತವ್ಯದಲ್ಲಿ ಘೋರ ದುರ್ನಡತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುವ ಬಗ್ಗೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿತ್ರದುರ್ಗ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 01–06–2005ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಎರಡು ವರ್ಷಗಳ ವಾರ್ಷಿಕ ವೇತನ ಬಡ್ತಿಗಳನ್ನು ಭವಿಷ್ಯದ ಬಡ್ತಿಗೆ ಧಕ್ಕೆ ಆಗುವಂತೆ ತಡೆಹಿಡಿದು ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿದ ದಂಡನೆ ವಿಧಿಸಿರುತ್ತಾರೆ .

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 30–06–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖೆ ವಿಚಾರಣೆಯಲ್ಲಿ ನೌಕರರ ವಿರುದ್ಧ ಮಾಡಲಾಗಿರುವ ಆರೋಪಗಳು ದೃಢಪಟ್ಟಿದ್ದು ನೌಕರರು ತಮ್ಮ ಪರಿಷ್ಕರಣ ಮೇಲ್ಮನವಿಯಲ್ಲಿನ ಎಲ್ಲಾ ಅಂಶಗಳ ಬಗ್ಗೆಯೂ ಪರಿಶೀಲಿಸಿದಾಗ, ಅಪೀಲುದಾರರು ತಮ್ಮ ವಾದಾಂಶಗಳಲ್ಲೂ ಸಮರ್ಥಿಸಿಕೊಳ್ಳುವಂತಹ ಯಾವುದೇ ಹೊಸ ಅಂಶಗಳು ಕಂಡು ಬಾರದೆ ಇದ್ದು, ನೌಕರರು ಮದ್ಯಪಾನ ಮಾಡಿ ಅಸಭ್ಯವಾಗಿ ವರ್ತಿಸಿರುವುದು ವಿಚಾರಣೆ ಸಮಯದಲ್ಲಿ ಸಾಬೀತಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 150 ಪೊಸಿಅ 2008 ಬೆಂಗಳೂರು, ದಿನಾಂಕ: 22ನೇ ಜುಲೈ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ. ಪಿ. ಧರಣೇಶಪ್ಪ, ಸಿಪಿಸಿ–1001, ಅಬ್ಬಿನಹೊಳೆ ಪೊಲೀಸ್ ಠಾಣೆ, ಚಿತ್ರದುರ್ಗ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1133

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಎಂ. ರವಿ, ಸಿಪಿಸಿ–1424, ರಿಪ್ಪನ್‌ಪೇಟೆ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ ಇವರ ಆದೇಶ ಸಂಖ್ಯೆ: ಡಿಇ: 4:2004 ಓಬಿ:273:(A):05 ದಿನಾಂಕ: 24–08–2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ: 43:ಅಪೀಲು: ಸಿಬ್ಬಂದಿ:2: 2005–06 ಓಬಿ:66: 07–08 ದಿನಾಂಕ: 30–06–2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:27–09–2007.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು:(2):99:07–08, ದಿನಾಂಕ:05–04–2008.

**ಪ್ರಸ್ತಾವನೆ:**

ಶ್ರೀ. ಎಂ. ರವಿ, ಸಿಪಿಸಿ–1424, ರಿಪ್ಪನ್‌ಪೇಟೆ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1. ಶ್ರೀ. ಎಂ. ರವಿ, ಸಿಪಿಸಿ–1424, ರಿಪ್ಪನ್‌ಪೇಟೆ ಪೊಲೀಸ್ ಠಾಣೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿ: 04–04–2004 ರಂದು ರಿಪ್ಪನ್‌ಪೇಟೆ ವಾಸಿ ಶ್ರೀ. ಪ್ರಕಾಶ್‌ವಾಲೇಕರ್ ಬಿನ್ ಕೃಷ್ಣಪ್ಪ ರವರ ಅಂಗಡಿಯಲ್ಲಿ ಚಪ್ಪಲಿಯನ್ನು ತೆಗೆದುಕೊಂಡು ಹೋಗುವಾಗ ರೂ.150/–ಗಳನ್ನು ಸಾಲವಾಗಿ ಕೇಳಿದ್ದು, ಆಗ ಶ್ರೀ. ಪ್ರಕಾಶ್

ವಾಲೇಕರ್ ರವರು ಸಾಲ ಕೊಡುವುದಿಲ್ಲವೆಂದು ತಿಳಿಸಿದಾಗ ಎ.ಪಿ.ಓ. ರವರು ಸದರಿಯವರಿಗೆ "ಎನೋ ಸಮಗಾರ್ ಸೂಳೆಮಗನೇ, ಬೋಳಿಮಗನೇ" ಎಂದು ಬೈದು ದೈಹಿಕ ಹಾಗೂ ಮಾನಸಿಕ ಹಿಂಸೆ ನೀಡಿ ಇಲಾಖೆಯ ಗೌರವಕ್ಕೆ ಕುಂದು ತರುವಂತೆ ಸಾರ್ವಜನಿಕ ಸ್ಥಳದಲ್ಲಿ ವರ್ತಿಸಿ, ದುರ್ನಡತೆಯನ್ನು ಪ್ರದರ್ಶಿಸಿರುತ್ತಾರೆ.

2. ಶ್ರೀಯುತರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಸಾರ್ವಜನಿಕರ ಜೊತೆಯಲ್ಲಿ ಸಂಯಮದಿಂದ ವರ್ತಿಸಿ ಇಲಾಖೆಯ ಬಗ್ಗೆ ಒಳ್ಳೆಯ ಅಭಿಪ್ರಾಯ ಮೂಡುವಂತೆ ಕಾರ್ಯ ನಿರ್ವಹಿಸಬೇಕಾಗಿದ್ದ ಎ.ಪಿ.ಓ. ರವರು ಸಾರ್ವಜನಿಕ ಸ್ಥಳದಲ್ಲಿ ಇಲಾಖೆಯ ಗೌರವಕ್ಕೆ ಕುಂದು ತರುವ ರೀತಿಯಲ್ಲಿ ವರ್ತಿಸಿ, ಕರ್ತವ್ಯದಲ್ಲಿ ನಿರಾಸಕ್ತಿ ಅಶಿಸ್ತು ಪ್ರದರ್ಶಿಸಿರುವುದಾಗಿ, ಪೊಲೀಸ್ ಠಾಣೆಯಲ್ಲೂ ಕೂಡ ಕರ್ತವ್ಯ ನಿರ್ಲಕ್ಷ್ಯ ಮನೋಭಾವ ಹೊಂದಿ ಎ.ಪಿ.ಓ. ರವರು ಬೇಜವಾಬ್ದಾರಿ ಅಶಿಸ್ತು ಮತ್ತು ದುರ್ನಡತೆಯನ್ನು ಪ್ರದರ್ಶಿಸಿರುತ್ತಾರೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 24–08–2005ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷ ಕಾಲ ಮುಂದೂಡಿ ಅಮಾನತ್ತಿನಲ್ಲಿದ್ದ ಅವಧಿಯನ್ನು ಅಮಾನತ್ತಿನಲ್ಲಿದ್ದಂತೆ ಪರಿಗಣಿಸಿದ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿ ಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 30–06–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ನೌಕರರ ಮೇಲೆ ಮಾಡಲಾಗಿರುವ ಆರೋಪಗಳು ಸಾಬೀತಾಗಿರುವ ಕಾರಣ ಆರೋಪಕ್ಕೆ ತಕ್ಕಂತೆ ದಂಡನೆಯನ್ನು ಶಿಸ್ತು ಪ್ರಾಧಿಕಾರಿಗಳು ವಿಧಿಸಿರುತ್ತಾರೆ. ನೌಕರರು ತಮ್ಮ ಪರಿಷ್ಕರಣ ಮೇಲ್ಮನವಿಯಲ್ಲಿ ಆರೋಪಗಳನ್ನು ನಿರಾಕರಿಸುವಂತಹ ಯಾವುದೇ ಪೂರಕ ದಾಖಲೆಗಳನ್ನು ಒದಗಿಸಿರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 153 ಪೊಶಿಅ 2008 ಬೆಂಗಳೂರು, ದಿನಾಂಕ: 22ನೇ ಜುಲೈ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ. ಎಂ. ರವಿ, ಸಿಪಿಸಿ–1424, ರಿಪ್ಪನ್‌ಪೇಟೆ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1132

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ನೇಮಿರಾಜು, ಪಿ.ಐ., ಹಾಲಿ ರಾಜ್ಯ ಗುಪ್ತವಾರ್ತೆ, ಬೆಂಗಳೂರು, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ, ಇವರ ಆದೇಶ ಸಂಖ್ಯೆ: ಸಿಬ್ಬಂದಿ:2:PR:62 ಓಬಿ:74: 2006–07 ದಿನಾಂಕ: 31–05–2007.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ: ಅಪೀಲು: 37:2007–08 ದಿನಾಂಕ: 19–12–2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 13–02–2008.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)114:2007–08 ದಿನಾಂಕ: 21–04–2008

**ಪ್ರಸ್ತಾವನೆ:**

ಶ್ರೀ. ನೇಮಿರಾಜು, ಪಿ.ಐ., ಹಾಲಿ ರಾಜ್ಯ ಗುಪ್ತವಾರ್ತೆ, ಬೆಂಗಳೂರು, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಇವರು ಮಂಡ್ಯ ಗ್ರಾಮಾಂತರ ವೃತ್ತದಲ್ಲಿ ಸಿಪಿಐ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಮಂಡ್ಯ ಗ್ರಾಮಾಂತರ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ: 336/2006 ಕಲಂ: 279.304(ಎ) ಐಪಿಸಿ ರೆ:ವಿ 134 (ಎ) & (ಬಿ) ಐಎಂವಿ ಆಕ್ಟ್ ಪ್ರಕರಣದ ತನಿಖಾಧಿಕಾರಿಯಾಗಿದ್ದರು. ಇವರು ಕೃತ್ಯ ನಡೆದ ನಂತರದ ವೇಳೆ ಅಥವಾ ಹಿಂದಿನ ದಿನಾಂಕಗಳಂದು ಕಾಣೆಯಾದ ವ್ಯಕ್ತಿಗಳ ವಿವರಗಳನ್ನು ಸಂಗ್ರಹಿಸಿ ತನಿಖೆ ಮಾಡಿರುವುದಿಲ್ಲ. ಹೀಗೆ ಇವರು ಪ್ರಮಾಣಿಕವಾಗಿ ಪ್ರಕರಣದ ತನಿಖೆ ನಡೆಸದೆ ಕರ್ತವ್ಯ ನಿರ್ಲಕ್ಷ್ಯತೆ ಎಸಗಿರುತ್ತಾರೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 31–05–2007ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಆರು ತಿಂಗಳ ಕಾಲ ಮುಂದೂಡಿ ನಂತರದ ವೇತನ ಬಡ್ತಿಗೆ ಯಾವುದೇ ಪರಿಣಾಮ ಬೀರದಂತೆ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 19–12–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಮೇಲ್ಮನವಿದಾರರು ಮೃತ ವ್ಯಕ್ತಿಯ ಹೆಸರು ವಿಳಾಸ ಪತ್ತೆಯ ಬಗ್ಗೆ ವಿವಿಧ ಜಿಲ್ಲಾ ಡಿ.ಸಿ.ಆರ್.ಜಿ. ಕೇಂದ್ರಗಳಿಂದ ಮಾಹಿತಿ ಪಡೆದಿರುವುದಿಲ್ಲ. ಮೃತಪಟ್ಟ ವ್ಯಕ್ತಿಯ ಪತ್ತೆಗಾಗಿ ಯಾವುದೇ ಪ್ರಾಮಾಣಿಕ ಪ್ರಯತ್ನ ನಡೆಸಿರುವುದಿಲ್ಲ. ಕೃತ್ಯೆ ಎಸಗಿದ ವಾಹನದ ಪತ್ತೆಯ ಬಗ್ಗೆ ಪ್ರಮಾಣಿಕ ಪ್ರಯತ್ನ ಮಾಡಿರುವುದಿಲ್ಲ. ಮೇಲ್ಮನವಿದಾರರು ಮೃತ ವ್ಯಕ್ತಿಯ ಹೆಸರು ವಿಳಾಸ ಹಾಗೂ ಅಪಘಾತ ಪಡಿಸಿದ ವಾಹನದ ಪತ್ತೆ ಆಗದ ಕಾರಣ "ಸಿ" ಅಂತಿಮ ವರದಿ ಸಲ್ಲಿಸಲು ಅನುಮತಿ ಕೋರಿದ್ದರು. ಆದರೆ ಪ್ರಕರಣದ ಪತ್ತೆಗಾಗಿ ಪ್ರಾಮಾಣಿಕ ಪ್ರಯತ್ನ ಮಾಡದೆ ಇರುವುದು ದಾಖಲಾತಿಗಳಿಂದ ದೃಢಪಟ್ಟಿದ್ದು, ಪ್ರಕರಣದ ಮೃತ ವ್ಯಕ್ತಿಯ ಹೆಸರು ವಿಳಾಸ ಹಾಗೂ ಅಪಘಾತ ಪಡಿಸಿದ ವಾಹನ ಪತ್ತೆ ಮಾಡುವ ಬಗ್ಗೆ ವಿಫಲರಾಗಿರುವುದರಿಂದ ಇವರಿಗೆ ಕರ್ನಾಟಕ ಪೊಲೀಸ್ ಶಿಸ್ತಿನ ನಡುವಳಿಗಳು 1965ರ ಪ್ರಕಾರ ಶಿಕ್ಷೆಯನ್ನು ನೀಡಲಾಗಿದೆ. ಗಸ್ತಿನಲ್ಲಿದ್ದ ಮುಖ್ಯ ಪೇದೆರವರು ಕೇಸನ್ನು ಸ್ವಯಂ ಪಿರ್ಯಾದಿಯಾಗಿ ದಾಖಲಿಸಿಕೊಂಡು ಮುಂದಿನ ತನಿಖೆಗೆ ಸಿಪಿಐ ರವರಿಗೆ ನೀಡಿರುವುದು ಸರಿಯಷ್ಟೆ. ಮೇಲ್ಮನವಿದಾರರು ಮೃತ ವ್ಯಕ್ತಿಯ ಹೆಸರು, ವಿಳಾಸ ಪತ್ತೆಯ ಬಗ್ಗೆ ವಿವಿಧ ಜಿಲ್ಲಾ ಡಿ.ಸಿ.ಆರ್.ಬಿ. ಕೇಂದ್ರಗಳಿಂದ ಮಾಹಿತಿ ಪಡೆದಿರುವುದಿಲ್ಲ. ಮೃತ ವ್ಯಕ್ತಿಯ ಅಪರಿಚಿತ ಗಂಡಸಿನ ಹೆಸರು, ವಿಳಾಸ ತಿಳಿಯಲು ಸ್ಥಳೀಯ ದಿನ ಪತ್ರಿಕೆಗಳಲ್ಲಿ ಹಾಗೂ ಟಿ.ವಿ.ಚಾನಲ್‌ಗಳಲ್ಲಿ ಪ್ರಕಟಿಸಲು ಮೇಲ್ಮನವಿದಾರರು ತೆಗೆದುಕೊಂಡ ಕ್ರಮದ ಬಗ್ಗೆ ಯಾವುದೇ ಆಧಾರ ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 171 ಪೊಸಿಅ 2008 ಬೆಂಗಳೂರು, ದಿನಾಂಕ: 28ನೇ ಜುಲೈ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ. ನೇಮಿರಾಜು, ಪಿ.ಐ., ಹಾಲಿ ರಾಜ್ಯ ಗುಪ್ತವಾರ್ತೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ನಾರಾಯಣಿ, ಹೆಚ್.ಸಿ–444, ಆಡುಗೋಡಿ ಪೊಲೀಸ್ ಠಾಣೆ, ಬೆಂಗಳೂರು ನಗರ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮಿಷನರ್, ದಕ್ಷಿಣ ವಿಭಾಗ, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ: ಡಿಇ:ಆರ್‌ಜೆ:4ಡಿಪಿಸಿ:ದ:04 ದಿನಾಂಕ: 23–09–2006.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮಿಷನರ್, ಆಡಳಿತ, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ:62:ಅಪೀಲು:06 ದಿನಾಂಕ:01–06–2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:10–08–2007.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು:(3):46:07–08, ದಿನಾಂಕ:20–02–2008.

**ಪ್ರಸ್ತಾವನೆ:**

ಶ್ರೀ. ನಾರಾಯಣಿ, ಹೆಚ್.ಸಿ–444, ಆಡುಗೋಡಿ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಶ್ರೀ. ನಾರಾಯಣಿ, ಹೆಚ್.ಸಿ.–444, ಆಡುಗೋಡಿ ಪೊಲೀಸ್ ಠಾಣೆ, ಆದ ನೀವು ತನಿಖಾ ಘಟಕ–2ರಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿ: 04–08–2004 ರಂದು ಠಾಣೆಗೆ ಬಂದಾಗ ದಿ: 03–08–2004 ರಂದು ಶ್ರೀಮತಿ. ನಿರ್ಮಲದೇವಿ, ಆಡುಗೋಡಿ ಪೊಲೀಸ್ ವಸತಿ ಗೃಹದ ವಾಸಿಯರ ಆತ್ಮಹತ್ಯೆಯ ಬಗ್ಗೆ ನಿಮ್ಮನ್ನು ವಿಚಾರಿಸಿದಾಗ ಪಿ.ಐ.ರವರೊಂದಿಗೆ ಬೇಜವಾಬ್ದಾರಿತನದಿಂದ ಮಾತನಾಡಿದ್ದು, ಪಿ.ಎಸ್.ಐ. ಶ್ರೀ. ಶಿವಣ್ಣ ರವರು ನಿಸ್ತಂತು ಮೂಲ ಕರೆ ಮಾಡಿದಾಗ ಎಲ್.ಆರ್.ಓ.ಪಿ. ಯಲ್ಲಿರುವುದಾಗಿ, ಬೇಕಾದರೆ ಗೈರು ಹಾಜರಿ ಬರೆದುಕೊಳ್ಳಲಿ ಎಂದು ನಿಸ್ತಂತುವಿನಲ್ಲಿ ಉತ್ತರಿಸಿದ್ದು, ಶಿಸ್ತು ಇಲಾಖೆಯಲ್ಲಿರುವ ನೀವು ಅಶಿಸ್ತು, ದುರ್ನಡತೆಯಿಂದ, ಬೇಜವಾಬ್ದಾರಿ ತನವನ್ನು ಪ್ರದರ್ಶಿಸಿರುತ್ತೀರಿ ಎಂದು ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮಿಷನರ್, ದಕ್ಷಿಣ ವಿಭಾಗ, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 23–09–2006ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಮುಂದೂಡಿದ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮಿಷನರ್, ಆಡಳಿತ, ಬೆಂಗಳೂರು ನಗರ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 01–06–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಮೇಲ್ಮನವಿದಾರರ ವಿರುದ್ಧ ವೈಮನಸ್ಯದ ಪ್ರತೀಕದ ವರದಿಯಾಗಿದೆಯೆಂದು ತಿಳಿಸಿದ್ದು, ಮೇಲ್ಮನವಿದಾರರಿಗೂ ವರದಿ ಸಲ್ಲಿಸಿದ ಅಧಿಕಾರಿಗೂ ಯಾವ ರೀತಿಯ ವೈಮನಸ್ಯ, ಅದು ಎಷ್ಟರ ಮಟ್ಟಿಗೆ ನಿಜವೆಂದು ನಿರೂಪಿಸುವಲ್ಲಿ ವಿಫಲರಾಗಿರುತ್ತಾರೆ. ಸಾರ್ವಜನಿಕರಿಂದ ಪಡೆದ ಹೇಳಿಕೆಯನ್ನು ಮೇಲ್ಮನವಿದಾರರು ತಮ್ಮ ಇಷ್ಟಾನುಸಾರ ಪಡೆದಿರುವರೆಂದು ಹಾಗೂ ಮೇಲ್ಮನವಿದಾರರು ನಿರ್ದೇಶನ ನೀಡಿ ಹೇಳಿಕೆ ಪಡೆದಿರುವರೆಂದು ಅಸಮಾದಾನದಿಂದ ತಮ್ಮ ವಿರುದ್ಧ (ಮೇಲ್ಮನವಿದಾರರ) ವರದಿ ಸಲ್ಲಿಸಿ ಅವರ ಶಿಕ್ಷೆಗೆ ಕಾರಣರಾಗಿರುವರೆಂದು ಪಿ.ಐ.ರವರ ಮೇಲೆ ದೂರಿರುವುದು ಭಾಲಿಶ: ವರ್ತನೆಯಾಗಿರುತ್ತದೆ. ಅಧೀನ ಸಿಬ್ಬಂದಿಗಳು ಪಡೆದ ನಿರ್ವಹಿಸಿದ ಕರ್ತವ್ಯದಲ್ಲಿ ನ್ಯೂನ್ಯತೆಗಳಿದ್ದಲ್ಲಿ ಮೇಲಾಧಿಕಾರಿಗಳು ಸೂಚನೆ ನೀಡಿ ತನಿಖೆಯ ಪ್ರಗತಿ ಮುಂದುವರೆಸುವರೇ ವಿನ: ಮೇಲ್ಮನವಿದಾರರು ತಿಳಿಸಿರುವಂತೆ ವರ್ತಿಸುವ ಅವಶ್ಯಕತೆ ಇರುವುದಿಲ್ಲ. ಮೇಲ್ಮನವಿದಾರರು ಪಡೆದಿದ್ದ ಹೇಳಿಕೆ ಸರಿಯಿಲ್ಲವೆಂದು ಪಿ.ಐ.ರವರು ಭಾವಿಸಿದ್ದಲ್ಲಿ ಅವರು ಸರಿಯಾಗಿ ಪಡೆದುಕೊಳ್ಳುವ ಅಧಿಕಾರ / ಅರ್ಹತೆ ಇದ್ದು, ಮೇಲ್ಮನವಿದಾರರು ವಿನಾ: ಕಾರಣ ತಮ್ಮ ತಪ್ಪನ್ನು ಮುಚ್ಚಿಹಾಕಲು ಮೇಲಾಧಿಕಾರಿಗಳನ್ನು ಕ್ಷುಲ್ಲಕ ಕಾರಣಗಳಿಗೆ ದೂಷಿಸಿರುವುದು ಕಂಡುಬರುತ್ತದೆ. ಮೇಲ್ಮನವಿದಾರರು ತಮ್ಮ ಸಮಜಾಯಿಷಿಯಲ್ಲಿ ಪಿ.ಎಸ್.ಐ.ರವರು ಠಾಣೆಗೆ ಬರಲು ಹೇಳಿದಾಗ ಠಾಣೆಗೆ ಹಿಂತಿರುಗಲಿಲ್ಲವೆಂದು ತಾವೇ ತಿಳಿಸಿರುತ್ತಾರೆ ಹಾಗೂ ಪಿ.ಐ.ರವರು ಮೇಲ್ಮನವಿದಾರರನ್ನು ಓ.ಪಿ.ಗೆ ನೇಮಕ

ಮಾಡಿಲ್ಲವೆಂದು ತಿಳಿಸಿರುವುದು, ಪಿ.ಎಸ್.ಐ.ರವರು ಠಾಣೆಗೆ ಹಿಂತಿರುಗಲು ನಿಸ್ತಂತುವಿನ ಮೂಲಕ ತಿಳಿಸಿದರೆಂದು ಮೇಲ್ಮನವಿದಾರರನ್ನು ಠಾಣೆಗೆ ಕರ್ತವ್ಯಕ್ಕೆ ನೇಮಕ ಮಾಡಿರಲಿಲ್ಲ ವೆಂಬುದನ್ನು ಸಾಬೀತು ಪಡಿಸುತ್ತದೆ ಹಾಗೂ ನಿಸ್ತಂತುವಿನ ಮೂಲಕ ಮೇಲ್ಮನವಿದಾರರು ಉತ್ತರಿಸಿರುವುದಾಗಿ ಅವರ ಹೇಳಿಕೆಯಿಂದಲೇ ಸಾಬೀತಾಗಿರುವುದರಿಂದ ಮೇಲ್ಮನವಿದಾರರು ದುರ್ನಡತೆಯನ್ನು ಪ್ರದರ್ಶಿಸಿಲ್ಲವೆಂದು ಹೇಳಲು ಸಾಧ್ಯವಾಗುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 67 ಪೊಸಿಅ 2008 ಬೆಂಗಳೂರು, ದಿನಾಂಕ: 28ನೇ ಜುಲೈ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ. ನಾರಾಯಣಿ, ಹೆಚ್.ಸಿ–444, ಆಡುಗೋಡಿ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಎನ್.ಕೆ. ಮಂಜುನಾಥ್, ಪಿ.ಎಸ್.ಐ., ಡಿಎಸ್ಎ ಘಟಕ, ದಕ್ಷಿಣ ಕನ್ನಡ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ ಮಂಗಳೂರು ಇವರ ಆದೇಶ ಸಂಖ್ಯೆ: ಸಿಬ್ಬಂದಿ ಇವಿ:02: 07 ಆದೇಶ ಪುಸ್ತಕ ಸಂ:75: 07–08 ದಿನಾಂಕ:02–07–2007.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು: 6:44: 07–08 ಓಬಿ ಸಂ: 81–07–08 ದಿನಾಂಕ: 12–12–2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:11–01–2008.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು:(2)124: 2007–08 ದಿನಾಂಕ: 01–04–2008.

**ಪ್ರಸ್ತಾವನೆ:**

ಶ್ರೀ. ಎನ್.ಕೆ. ಮಂಜುನಾಥ್, ಪಿ.ಎಸ್.ಐ., ಡಿಎಸ್ಎ ಘಟಕ, ದಕ್ಷಿಣ ಕನ್ನಡ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಶ್ರೀ. ಎನ್.ಕೆ. ಮಂಜುನಾಥ್, ಪಿ.ಎಸ್.ಐ., ಆದ ನೀವು ಬರ್ಕೆ ಪೊಲೀಸ್ ಠಾಣೆಯ ಅಪರಾಧ ವಿಭಾಗದಲ್ಲಿ ಸೇವೆಯಲ್ಲಿದ್ದು, ಪ್ರಸ್ತುತ ಅಮಾನತ್ತಿನಲ್ಲಿರುವಿರಿ. ದಿ:09–07–2006 ರಂದು ಬರ್ಕೆ ಠಾಣಾ ವ್ಯಾಪ್ತಿಯ ಮಠದ ಕಣಿ ಎಂಬಲ್ಲಿ ನಡೆದ ಕನ್ನಕಳವು ಪ್ರಕರಣ (ಬರ್ಕೆ ಠಾಣಾ ಮೊ.ನಂ.65/2006)ದ ತನಿಖಾಧಿಕಾರಿಯಾದ ನೀವು ಪ್ರಕರಣದ ತನಿಖೆಯ ಸಮಯ ಕಳ್ಳತನ ನಡೆದ ಮನೆಯ ಪಕ್ಕದಲ್ಲಿ ಶ್ರೀ. ಮೋಹನ್ ರಾವ್ ಎಂಬವರ ಮನೆ ನಿರ್ಮಾಣದ ಕೆಲಸವನ್ನು ಮಾಡುತ್ತಿದ್ದು ಕೂಲಿಯಾಳುಗಳನ್ನು ಕಳವು ಪ್ರಕರಣದ ವಿಚಾರಣೆಯ ಬಗ್ಗೆ ಠಾಣೆಗೆ ಕರೆಸಿರುತ್ತೀರಿ. ಅದರಂತೆಯೇ ದಿ: 15–07–2006 ರಂದು ಸಂಜೆ ಸದ್ರಿ ಕೂಲಿಯಾಳುಗಳಾದ ಗೋವಿಂದ, ಬಸವರಾಜ, ಹನುಮಂತ, ಭರಮಪ್ಪ ಮತ್ತು ಎಲ್ಲಮ್ಮ ಎಂಬುವರು ಕಂಟ್ರಾಕ್ಟರ್ ಶ್ರೀ. ಜೀವನ್‌ರಾಜ್ ಶೆಣ್ಯೆ ಎಂಬವರೊಂದಿಗೆ ಬರ್ಕೆ ಪೊಲೀಸ್ ಠಾಣೆಗೆ ಬಂದಿದ್ದು, ಕಳವು ಪ್ರಕರಣದ ವಿಚಾರಣೆಯ ಸಮಯ ನೀವು ಕೂಲಿಯಾಳುಗಳ ಪೈಕಿ ಬಸವರಾಜ, ಹನುಮಂತ ಮತ್ತು ಗೋವಿಂದ ಎಂಬವರಿಗೆ ಅವಾಚ್ಯ ಶಬ್ದಗಳಿಂದ ಬೈದು ಅವರಿಗೆ ಹೊಡೆದು ದೈಹಿಕ ಹಿಂಸೆ ನೀಡಿ ಸದ್ರಿ 3 ಮಂದಿ ಕೂಲಿಯಾಳುಗಳು ಆಸ್ಪತ್ರೆಯಲ್ಲಿ ಒಳರೋಗಿಗಳಾಗಿ ಚಿಕಿತ್ಸೆ ಪಡೆಯಲು ಕಾರಣರಾಗಿ ಕರ್ತವ್ಯ ನಿರ್ವಹಣೆಯ ವೇಳೆ ಕಾನೂನಿಗೆ ವಿರುದ್ಧವಾಗಿ ವರ್ತಿಸಿ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡು ತೀವ್ರ ತರಹದ ಅಶಿಸ್ತು ಹಾಗೂ ಗಂಭೀರ ದುರ್ನಡತೆ ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ ಮಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 02–07–2007ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಎರಡು ವರ್ಷಗಳ ಕಾಲ ತದನಂತರ ಗಳಿಸುವ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ತರುವ ಹಾಗೆ ಮುಂದೂಡಿದ ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸುವ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಆದಾಗ್ಯೂ ಅಧಿಕಾರಿಗಳಿಗೆ ವಿಧಿಸಿರುವ ದಂಡನೆ ಹೆಚ್ಚಿನದಾಗಿದ್ದರಿಂದ ಮಾನವೀಯತೆ ದೃಷ್ಟಿಯಿಂದ ಶಿಸ್ತು ಪ್ರಾಧಿಕಾರಿಗಳು ಆದೇಶವನ್ನು ಮಾರ್ಪಡಿಸಿ ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 12–12–2007ರ ಆದೇಶದಲ್ಲಿ ಮೇಲ್ಮನವಿಯನ್ನು ಪರಿಗಣಿಸಿ ಶಿಸ್ತು ಪ್ರಾಧಿಕಾರಿಗಳು ಆದೇಶವನ್ನು ಮಾರ್ಪಡಿಸಿ, ಅಧಿಕಾರಿಗಳ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಎರಡು ವರ್ಷಗಳ ಕಾಲ ಮುಂದೂಡಿ ಆದೇಶ ಹೊರಡಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿದಾರರು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಅವರ ಮೇಲಿನ ಸಾಬೀತಾದ ನಿರ್ದಿಷ್ಟ ದೋಷಾರೋಪಣೆಯನ್ನು ಅಲ್ಲಗಳೆಯುವಂತಹ ಯಾವುದೇ ಪ್ರಬಲ ಸಾಕ್ಷ್ಯಾಧಾರ / ವಾಧಾಂಶಗಳಿರುವುದಿಲ್ಲ. ಅವರ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಯಾವುದೇ ಹುರುಳಿಲ್ಲ. ಇಲಾಖಾ ವಿಚಾರಣೆಯ ವೇಳೆ ಪರಿಷ್ಕರಣ ಮೇಲ್ಮನವಿದಾರರಿಗೆ ಅವರ ಮೇಲಿನ ನಿರ್ದಿಷ್ಟ ದೋಷಾರೋಪಣೆಯಿಂದ ಪ್ರತಿರಕ್ಷಿಸಿಕೊಳ್ಳಲು ನಿಯಮಬದ್ದವಾದ ಎಲ್ಲಾ ಅವಕಾಶಗಳನ್ನು ಒದಗಿಸಿದ್ದು, ಅವರಿಗೆ ಸಹಜ ನ್ಯಾಯವನ್ನು ನಿರಾಕರಿಸಲಾಗಿಲ್ಲ. ಶಿಸ್ತುಪಾಲನಾಧಿಕಾರಿಯವರು ಅವರಿಗೆ ವಿಧಿಸಿದ ಶಿಕ್ಷೆಯನ್ನು ಮೇಲ್ಮನವಿ ಪ್ರಾದಿಕಾರಿಯವರು ಮಾನವೀಯ ದೃಷ್ಟಿಯಿಂದ ಮಾರ್ಪಡಿಸಿ ಕಡಿಮೆ ಮಾಡಿದ್ದು, ಅದು ಅವರ ಮೇಲಿನ ಸಾಬೀತಾದ ದೋಷಾರೋಪಣೆಯ ಗುರುತ್ವಕ್ಕೆ ತಕ್ಕುದಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 124 ಪೊಸಿಅ 2008 ಬೆಂಗಳೂರು, ದಿನಾಂಕ: 26ನೇ ಜುಲೈ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ. ಎನ್.ಕೆ. ಮಂಜುನಾಥ್, ಪಿ.ಎಸ್.ಐ., ಡಿಎಸ್‌ಎ ಘಟಕ, ದಕ್ಷಿಣ ಕನ್ನಡ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಸುಂಕಪ್ಪ, ಸಿಪಿಸಿ–175, ಕೊಪ್ಪಳ ನಗರ ಪೊಲೀಸ್ ಠಾಣೆ, ಕೊಪ್ಪಳ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಕೊಪ್ಪಳ, ಇವರ ಆದೇಶ ಸಂಖ್ಯೆ: ಶಿಕ್ಷೆ:1:07 ಆ.ಪು.ಸಂ:193: 07 ದಿನಾಂಕ: 24–02–2007.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಅಪೀಲು: 57:ಈವ: 07 ಆ.ಪು:411: ಈವ: 07–4078 ದಿನಾಂಕ: 13–07–2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:04–10–2007.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು:02:104: 07–08, ದಿನಾಂಕ: 02–02–2008.

**ಪ್ರಸ್ತಾವನೆ:**

ಶ್ರೀ. ಸುಂಕಪ್ಪ, ಸಿಪಿಸಿ-175, ಕೊಪ್ಪಳ ನಗರ ಪೊಲೀಸ್ ಠಾಣೆ, ಕೊಪ್ಪಳ ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಶ್ರೀ. ಸುಂಕಪ್ಪ, ಸಿಪಿಸಿ-175, ಕೊಪ್ಪಳ ನಗರ ಪೊಲೀಸ್ ಠಾಣೆ, ಕೊಪ್ಪಳ ಜಿಲ್ಲೆ, ಇವರು ದಿ: 20-11-2006 ರಂದು ಕೊಪ್ಪಳ ನಗರದ ಬಿಟ್ ನಂ.7ರಲ್ಲಿ ರಾತ್ರಿ ಗಸ್ತು ಕರ್ತವ್ಯಕ್ಕೆ ನೇಮಕ ಮಾಡಿದ್ದು, ಅಂದು ಉತ್ತರ ಸಲ್ಲಿಸದೇ ಇರುವುದೆ. ನಂತರ ಪಿ.ಎಸ್.ಐ.ರವರು ಬೀಟ್ ನಂ.7 ರಲ್ಲಿರುವ ಶ್ರೀ.ಕೃಷ್ಣ ಮಂದಿರದ ಹತ್ತಿರ ಬಂದು ನಿಮ್ಮನ್ನು ಚೆಕ್ ಮಾಡಿದಾಗ ನೀವು ಮಲಗಿದ್ದು, ಆಗ ಪಿ.ಎಸ್.ಐ. ರವರು ನಿಮ್ಮನ್ನು ಎಬ್ಬಿಸಿ ವಿಚಾರಿಸಿದಾಗ ನೀವು ಅವರೊಂದಿಗೆ ಏಕವಚನದಲ್ಲಿ ಅಸಭ್ಯವಾಗಿ ವರ್ತಿಸಿ ಕರ್ತವ್ಯ ನಿರ್ಲಕ್ಷತೆ ಮತ್ತು ದುರ್ನಡತೆಯನ್ನು ಪ್ರದರ್ಶಿಸಿರುವಿರಿ ಎಂದು ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಕೊಪ್ಪಳ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 24-02-2007ರ ಆದೇಶದಲ್ಲಿ ಅರ್ಜಿದಾರರಿಗೆ ಇನ್ನು ಮುಂದೆ ತುಂಬಾ ಎಚ್ಚರಿಕೆಯಿಂದ ಇರುವಂತೆ ಸೂಚಿಸುತ್ತಾ ಇನ್ನೊಂದು ಬಾರಿ ಎಚ್ಚರಿಕೆ ನೀಡಲಾಗಿದೆ. ದಿ: 15-12-2006 ರಿಂದ ದಿ: 24-01-2007ರ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿದ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 13-07-2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಮೇಲ್ಮನವಿದಾರರಿಗೆ ರಾತ್ರಿ ಗಸ್ತು ಕರ್ತವ್ಯಕ್ಕೆ ನಿಯೋಜಿಸಿದಾಗ, ಅವರು ಬೀಟ್ ನಂ-7ರಲ್ಲಿ ರಾತ್ರಿ ಗಸ್ತು ಕರ್ತವ್ಯ ನಿರ್ವಹಿಸದೇ ಮಲಗಿಕೊಂಡಿರುವುದು ಕಂಡುಬಂದಿರುತ್ತದೆ. ಆದ್ದರಿಂದ ಮೇಲ್ಮನವಿದಾರರ ವಿರುದ್ಧ ಎಸ್.ಪಿ.ಕೊಪ್ಪಳ ರವರು ತೆಗೆದು ಕೊಂಡಿರುವ ಶಿಸ್ತಿನ ಕ್ರಮವು ಸಮರ್ಥನೀಯವಾಗಿರುತ್ತದೆ. ಮೇಲ್ಮನವಿಯಲ್ಲಿ ಪರಿಗಣಿಸಬಹುದಾದ ಅಂಶಗಳು ಕಂಡು ಬಂದಿರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 62 ಪೊಸಿಅ 2008 ಬೆಂಗಳೂರು, ದಿನಾಂಕ: 28ನೇ ಜುಲೈ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶ್ರೀ. ಸುಂಕಪ್ಪ, ಸಿಪಿಸಿ-175, ಕೊಪ್ಪಳ ನಗರ ಪೊಲೀಸ್ ಠಾಣೆ, ಕೊಪ್ಪಳ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1161

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ವಿಷಯ:** ಕೈಮಗ್ಗ ಮತ್ತು ಜವಳಿ ಇಲಾಖೆಯಲ್ಲಿ ಜವಳಿ ಪ್ರವರ್ಧನಾಧಿಕಾರಿ ವೃಂದದಿಂದ ಸಹಾಯಕ ನಿರ್ದೇಶಕರ ಹುದ್ದೆಗೆ ಪೂರ್ವಾನ್ವಯವಾಗಿ ಬಡ್ತಿ ನೀಡುವ ಕುರಿತು.

**ಓದಲಾಗಿದೆ:**

1. ಸರ್ಕಾರದ ಅಧಿಸೂಚನೆ ಸಂಖ್ಯೆ: ವಾಕೈ 30 ಜಕೈಸೇ 2005, ದಿನಾಂಕ 6-2-2008.
2. ಜವಳಿ ಅಭಿವೃದ್ಧಿ ಆಯುಕ್ತರು ಕೈಮಗ್ಗ ಮತ್ತು ಜವಳಿ ಇಲಾಖೆ ಇವರ ಪತ್ರ ಸಂ: ಕೈಜಇ/ ಆಡಳಿತ/ಸಿ-4/43/08, ದಿನಾಂಕ 8-1-2008.

3. ಕೈಮಗ್ಗ ಮತ್ತು ಜವಳಿ ಇಲಾಖೆಯ ಜವಳಿ ಪ್ರವರ್ಧನಾಧಿಕಾರಿ ವೃಂದದಿಂದ ಸಹಾಯಕ ನಿರ್ದೇಶಕರ ಹುದ್ದೆಗೆ ದಿನಾಂಕ 14–5–2007ರ ಇಲಾಖಾ ಬಡ್ತಿ ಸಮಿತಿ ಸಭೆಯ ನಡವಳಿ.
4. ಸರ್ಕಾರದ ಅಧಿಸೂಚನೆ ಸಂಖ್ಯೆ: ವಾಕೈ 20 ಜಕೈಸೇ 2001, ದಿನಾಂಕ 12–9–2001.
5. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1093/ ವೆಚ್ಚ.1/2007, ದಿ: 25–10–2007.
6. ಕರ್ನಾಟಕ ಲೋಕ ಸೇವಾ ಆಯೋಗ ಪತ್ರ ಸಂಖ್ಯೆ: PSC/196/CNS07, ದಿ: 25–8–2008.

**ಪ್ರಸ್ತಾವನೆ:**

1) ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆಯಲ್ಲಿ ಕೈಮಗ್ಗ ಮತ್ತು ಜವಳಿ ಇಲಾಖೆಯ 9 ಜವಳಿ ಪ್ರವರ್ಧನಾಧಿಕಾರಿಗಳಿಗೆ ಸಹಾಯಕ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಆಧಾರದ ಮೇಲೆ ಬಡ್ತಿ ನೀಡಲಾಗಿರುತ್ತದೆ. ಸದರಿ ಅಧಿಸೂಚನೆಯಲ್ಲಿ ಕ್ರಮ ಸಂಖ್ಯೆ (1) ರಿಂದ (3)ರವರೆಗಿನ ಈ ಕೆಳಕಂಡ 3 ಅಧಿಕಾರಿಗಳಿಗೆ ಮೇಲೆ ಓದಲಾದ (2)ರ ಪತ್ರ ಹಾಗೂ ಮೇಲೆ ಓದಲಾದ (3)ರ ಇಲಾಖಾ ಬಡ್ತಿ ಸಮಿತಿಯ ನಡವಳಿ ಮತ್ತು (4) ಅಧಿಸೂಚನೆಯನ್ವಯಲ್ಲಿ ಜವಳಿ ಪ್ರವರ್ಧನಾಧಿಕಾರಿಗಳು ನಿಯಮ 32ರಲ್ಲಿ ಸ್ವತಂತ್ರ ಪ್ರಭಾರದ ಮೇಲೆ ಸಹಾಯಕ ನಿರ್ದೇಶಕರ ಹುದ್ದೆಯಲ್ಲಿ ದಿನಾಂಕ 12–9–2001 ರಿಂದ ಕಾರ್ಯನಿರ್ವಹಿಸುತ್ತಿದ್ದು ಇವರುಗಳಿಗೆ ಸಹಾಯಕ ನಿರ್ದೇಶಕರ ಹುದ್ದೆಗಳು ಲಭ್ಯವಾದ 18–8–2005 ದಿನಾಂಕದಿಂದ ಪೂರ್ವಾನ್ವಯವಾಗಿ ಬಡ್ತಿಗೆ ಪರಿಗಣಿಸಲು ತೀರ್ಮಾನಿಸಿರುತ್ತದೆ.

**ಶ್ರೀಯುತರು:**

1) ಬಿ.ಟಿ. ಪಾಂಡುರಂಗಪ್ಪ
2) ಪಿ.ಡಿ. ಪನ್ನೀರ್ ಸೆಲ್ವಂ ಮತ್ತು
3) ಜಿ.ಪಿ. ಶ್ರೀನಿವಾಸ ಮೂರ್ತಿ

2) ಈ ಕುರಿತು ಸಮಗ್ರ ಪ್ರಸ್ತಾವನೆಯನ್ನು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಗಾಗಿ ಕಳುಹಿಸಲಾಗಿದ್ದು, ಮೇಲೆ ಓದಲಾದ (5)ರ ಪತ್ರದಲ್ಲಿ ಸದರಿ ಆಯೋಗವು ಶ್ರೀ ಬಿ.ಟಿ. ಪಾಂಡುರಂಗಪ್ಪ, ಶ್ರೀ ಪಿ.ಡಿ. ಪನ್ನೀರ್ ಸೆಲ್ವಂ ಮತ್ತು ಶ್ರೀ ಜಿ.ಪಿ. ಶ್ರೀನಿವಾಸ ಮೂರ್ತಿ ಜವಳಿ ಪ್ರವರ್ಧನಾಧಿಕಾರಿಗಳು ಇವರುಗಳಿಗೆ ಸಹಾಯಕ ನಿರ್ದೇಶಕರ ಮುಂಬಡ್ತಿಗೆ ಹುದ್ದೆಗಳು ಲಭ್ಯವಾದ ದಿನಾಂಕ 18–8–2005 ರಿಂದ ಪೂರ್ವಾನ್ವಯವಾಗಿ ಬಡ್ತಿ ನೀಡಲು ಸಹಮತಿ ನೀಡಿರುತ್ತದೆ.

3) ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಿದೆ:

**ಸರ್ಕಾರದ ಆದೇಶ ಸಂಖ್ಯೆ: ವಾಕೈ 30 ಜಕೈಸೇ 2005, ಬೆಂಗಳೂರು ದಿನಾಂಕ 12–9–2008**

4) ಕೈಮಗ್ಗ ಮತ್ತು ಜವಳಿ ಇಲಾಖೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ–32ರಡಿಯಲ್ಲಿ ಸ್ವತಂತ್ರ ಪ್ರಭಾರದಲ್ಲಿ ಸಹಾಯಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಈ ಕೆಳಕಂಡ 3 ಅಧಿಕಾರಿಗಳಿಗೆ ಅವರ ಹೆಸರುಗಳ ಮುಂದೆ ನಮೂದಿಸಿರುವಂತೆ, ಅವರನ್ನು ಸಹಾಯಕ ನಿರ್ದೇಶಕರ ಮುಂಬಡ್ತಿ ಹುದ್ದೆಗಳು ಲಭ್ಯವಾದ ದಿನಾಂಕ 18–8–2005 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವೆಗಳು (ಆರ್‌ಪಿಪಿಪಿ) ನಿಯಮಾವಳಿ 1978 ನಿಯಮ 2(3)ರ ಅನುಸಾರ ಸಹಾಯಕ ನಿರ್ದೇಶಕರ ಹುದ್ದೆಗೆ ಪೂರ್ವಾನ್ವಯವಾಗಿ ಪದೋನ್ನತಿಗೆ ಪರಿಗಣಿಸಿ ಮುಂಬಡ್ತಿ ನೀಡಲಾಗಿದೆ. ಅದರಂತೆಯೇ ಪ್ರಸ್ತಾಪಿತ ಅಧಿಕಾರಿಗಳು ತತ್ಸಂಬಂಧ ಆರ್ಥಿಕ ಸೌಲಭ್ಯಗಳನ್ನೂ ಸಹ ಸದರಿ ದಿನಾಂಕದಿಂದ ಪಡೆಯಲು ಅರ್ಹರಿರುತ್ತಾರೆ.

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು | ಕರ್ನಾಟಕ ನಾಗರೀಕ ಸೇವೆಗಳು (ಆರ್.ಪಿ.ಪಿ.ಪಿ.) 1978ರ ನಿಯಮ 2(3)ರನ್ವಯ ಜವಳಿ ಸಹಾಯಕ ನಿರ್ದೇಶಕರ ಹುದ್ದೆಗೆ ಪೂರ್ವಾನ್ವಯ ಮುಂಬಡ್ತಿಗೆ ಪರಿಗಣಿಸಿದ ಅವಧಿ |
|---|---|---|
| 1 | ಶ್ರೀ ಬಿ.ಟಿ ಪಾಂಡುರಂಗಪ್ಪ | 18–8–2005 ರಿಂದ 6–2–2008 |
| 2 | ಶ್ರೀ ಪಿ.ಡಿ. ಪನ್ನೀರ್ ಸೆಲ್ವಂ | 18–8–2005 ರಿಂದ 6–2–2008 |
| 3 | ಶ್ರೀ ಜಿ.ಪಿ. ಶ್ರೀನಿವಾಸ ಮೂರ್ತಿ | 18–8–2005 ರಿಂದ 6–2–2008 |

5) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1093 ವೆಚ್ಚ.1/2007 ದಿ: 25–10–2007ರಲ್ಲಿ ನೀಡಲಾದ ಸಹಮತಿಯ ಮೇರೆಗೆ ಮತ್ತು ಕರ್ನಾಟಕ ಲೋಕ ಸೇವಾ ಆಯೋಗ ಪತ್ರ ಸಂಖ್ಯೆ: PSC/196/CNS/07 ದಿನಾಂಕ 25–8–2008 ಮೂಲಕ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1314

**ಸಿ. ರವಿಕುಮಾರ್**
ಪೀಠಾಧಿಕಾರಿ (ಜವಳಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಒಳಾಡಳಿತ ಸಚಿವಾಲಯ**

**ಸಂಖ್ಯೆ: ಒಇ 354 ಪೊಸಿಪ 2008, ಬೆಂಗಳೂರು ದಿನಾಂಕ 25ನೇ ಅಕ್ಟೋಬರ್ 2008**

**ತಿದ್ದುಪಡಿ**

ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 347 ಪೊಸಿಪ 2007, ದಿನಾಂಕ 7–11–2007ರಲ್ಲಿ ಈ ಕೆಳಕಂಡ ತಿದ್ದುಪಡಿಗಳನ್ನು ಓದಿಕೊಳ್ಳತಕ್ಕದ್ದು.

| ಕ್ರಮ ಸಂಖ್ಯೆ | ಅಧಿಸೂಚನೆಯಲ್ಲಿನ ಕ್ರಮ ಸಂಖ್ಯೆ | ಅಧಿಸೂಚನೆಯಲ್ಲಿ ಪ್ರಕಟವಾಗಿರುವುದು | ತಿದ್ದುಪಡಿಯ ನಂತರ ಓದಿಕೊಳ್ಳಬೇಕಾಗಿರುವುದು |
|---|---|---|---|
| 1 | 88 | ಶ್ರೀ ಜಿ.ಆರ್. ಕಾಂಬಳೆ | ಗಿರಿಮಲ ರಾಯಪ್ಪ ಕಾಂಬ್ಲೆ |
| 2 | 108 | ಶ್ರೀ ಮಹಮ್ಮದ್ ಬಿ. ಪಾಟೀಲ್ | ಮಹಮ್ಮದ್ ಅನ್ವರ್ @ ಬಾಬಜಾನ್ ಪಾಟೀಲ್ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1493

**ಟಿ.ಎನ್ ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಸಂಖ್ಯೆ: ಒಇ 258 ಪೊಸಿಪ 2008, ಬೆಂಗಳೂರು ದಿನಾಂಕ 22ನೇ ಅಕ್ಟೋಬರ್ 2008**

**ತಿದ್ದುಪಡಿ**

ಸರ್ಕಾರದ ಆದೇಶ ಸಂಖ್ಯೆ: ಒಇ 352 ಪೊಸಿಪ 2007, ದಿನಾಂಕ 6–11–2007ರ ಕ್ರಮ ಸಂಖ್ಯೆ 23ರಲ್ಲಿ "ಕೆ. ಮಹದೇವಯ್ಯ" ಎಂಬುವರ ಬದಲಾಗಿ "ಮಹದೇವಯ್ಯ" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1494

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಸಮಾಜ ಕಲ್ಯಾಣ ಸಚಿವಾಲಯ**

**ವಿಷಯ:** 2008–09ನೇ ಸಾಲಿಗೆ ಸಮಾಜ ಕಲ್ಯಾಣ ಇಲಾಖೆಯ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗಾಗಿ ಹೊಸ ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರದ ಬಾಲಕ/ಬಾಲಕಿಯರ ವಿದ್ಯಾರ್ಥಿ ನಿಲಯಗಳನ್ನು ಪ್ರಾರಂಭಿಸುವ ಬಗ್ಗೆ.

**ಓದಲಾಗಿದೆ:**
1. ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ರವರ ಪತ್ರ ಸಂಖ್ಯೆ: ಸಕನಿ/ಇಡಿ–4/ಸಿಆರ್–4/2008–09, ದಿನಾಂಕ 9–7–2008.
2. ಆಯುಕ್ತರು, ಸಮಾಜ ಕಲ್ಯಾಣ ಇಲಾಖೆರವರ ಪತ್ರ ಸಂಖ್ಯೆ: ಸಕನಿ/ಇಡಿ–4/ಸಿಆರ್–4/2008–09, ದಿನಾಂಕ: 29–7–2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸಮಾಜ ಕಲ್ಯಾಣ ಇಲಾಖೆಯ ಆಯುಕ್ತರ ಪ್ರಸ್ತಾವನೆಯಲ್ಲಿ 2008–09ನೇ ಸಾಲಿನ ಆಯವ್ಯಯದಲ್ಲಿ ಪರಿಶಿಷ್ಟ ಜಾತಿಯವರ ಕಲ್ಯಾಣಕ್ಕಾಗಿ ವಸತಿ ಸೌಲಭ್ಯ ಒದಗಿಸಿ ಹೆಚ್ಚಿನ ಶಿಕ್ಷಣಾವಕಾಶವನ್ನು ಕಲ್ಪಿಸಿ ಉತ್ತಮ ಶಿಕ್ಷಣ ನೀಡುವ ಸಲುವಾಗಿ ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರಿಗೆ ಹೆಚ್ಚಿನ ಪ್ರಮಾಣದಲ್ಲಿ ಉನ್ನತ ಶಿಕ್ಷಣಕ್ಕೆ ಅವಕಾಶ ಕಲ್ಪಿಸಲು ನೂತನವಾಗಿ ಹಾಗೂ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗಾಗಿ ಹೊಸ ವಿದ್ಯಾರ್ಥಿ ನಿಲಯಗಳನ್ನು ಪ್ರಾರಂಭಿಸುವುದಕ್ಕಾಗಿ ಸರ್ಕಾರವು ಘೋಷಿಸಿರುವ ಮೇಲ್ಕಂಡ ಯೋಜನೆಯನ್ನು ಅನುಷ್ಠಾನಗೊಳಿಸಲು 2008–09ನೇ ಸಾಲಿನ ರಾಜ್ಯ ಆಯವ್ಯಯ ಯೋಜನೆಯ ಲೆಕ್ಕಶೀರ್ಷಿಕೆ 2225–01–277–0–63ರಡಿ ರೂ. 350.00 ಲಕ್ಷಗಳ ಅನುದಾನವನ್ನು ಕಾಯ್ದಿರಿಸಿಕೊಳ್ಳಲಾಗಿದೆ.

2008–09ನೇ ಸಾಲಿನ ಬಡ ಪರಿಶಿಷ್ಟ ಜಾತಿಯ ಬಾಲಕ/ಬಾಲಕಿಯರಿಗೆ ಕಾಲೇಜು ಶೈಕ್ಷಣಿಕ ಮಟ್ಟವನ್ನು ಸುಧಾರಿಸಲು ಸೂಕ್ತ ವಸತಿ ಸೌಕರ್ಯವನ್ನು ನೀಡಲು ಪಿಯುಸಿಯಿಂದ ಸ್ನಾತಕೋತ್ತರ ಪದವಿಯವರೆಗೆ ಹಾಗೂ ಇಂಜಿನಿಯರಿಂಗ್, ಮೆಡಿಕಲ್ ಮುಂತಾದ ವೃತ್ತಿಪರ ವ್ಯಾಸಂಗದ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ 29 ಜಿಲ್ಲಾ ಕೇಂದ್ರಗಳಲ್ಲಿ ತಲಾ 1 ಬಾಲಕಿಯರ ಮತ್ತು 1 ಬಾಲಕರ ಅಂದರೆ 2 ಕಾಲೇಜು ವಿದ್ಯಾರ್ಥಿ ನಿಲಯಗಳು ಒಟ್ಟು 29 ಜಿಲ್ಲೆಗಳಲ್ಲಿ 58 ಕಾಲೇಜು ವಿದ್ಯಾರ್ಥಿ ನಿಲಯಗಳನ್ನು ಹಾಗೂ ಉಳಿದಂತೆ ಬೇಡಿಕೆ ಇರುವ 42 ತಾಲ್ಲೂಕು ಕೇಂದ್ರಗಳಲ್ಲಿ ಕಾಲೇಜು ವಿದ್ಯಾರ್ಥಿ

ನಿಲಯಗಳನ್ನು ಒಟ್ಟು 100 ಕಾಲೇಜು ವಿದ್ಯಾರ್ಥಿ ನಿಲಯಗಳನ್ನು ಪ್ರತಿ ವಿದ್ಯಾರ್ಥಿ ನಿಲಯಕ್ಕೆ 100 ಸಂಖ್ಯಾಬಲದಂತೆ ಒಟ್ಟು 10,000 ವಿದ್ಯಾರ್ಥಿಗಳಿಗೆ ಹೊಸದಾಗಿ ಕಾಲೇಜು ವಿದ್ಯಾರ್ಥಿ ನಿಲಯಗಳನ್ನು ಪ್ರಾರಂಭಿಸಲು ಈ ವಿದ್ಯಾರ್ಥಿ ನಿಲಯಗಳಿಗೆ 100 ಮೇಲ್ವಿಚಾರಕರುಗಳ ಹುದ್ದೆಗಳು ಹಾಗೂ 550 ಅಡುಗೆಯವರು, ಅಡುಗೆ ಸಹಾಯಕರು, ಕಾವಲುಗಾರರ ಹುದ್ದೆಗಳನ್ನು ಸೃಜಿಸಿ ಪ್ರತಿ ವಿದ್ಯಾರ್ಥಿ ನಿಲಯದ ನಿರ್ವಹಣಾ ವೆಚ್ಚಕ್ಕಾಗಿ ರೂ. 3.50 ಲಕ್ಷಗಳಂತೆ ಒಟ್ಟಾರೆ ರೂ. 350.00 ಲಕ್ಷಗಳನ್ನು ಪ್ರಸಕ್ತ ಸಾಲಿನ ರಾಜ್ಯ ಆಯವ್ಯಯ ಲೆಕ್ಕಶೀರ್ಷಿಕೆ 2225–01–277–0–63 ರಡಿಯಲ್ಲಿ ಒಟ್ಟು ರೂ. 350.00 ಲಕ್ಷಗಳನ್ನು ಒದಗಿಸಿರುವ ಅನುದಾನದಲ್ಲಿ ರೂ. 350.00 ಲಕ್ಷಗಳು ಖರ್ಚು ಮಾಡಲು ಅನುಮತಿ ಹಾಗೂ ಬಿಡುಗಡೆ ಮಾಡಲು ಆದೇಶ ನೀಡಬೇಕೆಂದು ಕೋರಿರುತ್ತಾರೆ. ಇದಕ್ಕೆ ಸಂಬಂಧಿಸಿದ ತಡೆಪಟ್ಟಿಯನ್ನು ಹಾಗೂ ಹೊಸ ವಿದ್ಯಾರ್ಥಿ ನಿಲಯಗಳ ಪ್ರಾರಂಭಕ್ಕಾಗಿ ಬಂದಿರುವ ಜಿಲ್ಲಾವಾರು ಬೇಡಿಕೆಗಳ ಪಟ್ಟಿಯನ್ನು ಲಗತ್ತಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪ್ರಸ್ತಾವನೆಯಲ್ಲಿ 100 ಪರಿಶಿಷ್ಟ ಜಾತಿಯ ಕಾಲೇಜು ವಿದ್ಯಾರ್ಥಿ ನಿಲಯಗಳನ್ನು ಹೊಸದಾಗಿ ಪ್ರಾರಂಭಿಸಬೇಕಾದ ಸ್ಥಳದ ವಿವರಗಳನ್ನು ಸಲ್ಲಿಸುತ್ತಾ ಸದರಿ ಸ್ಥಳಗಳಲ್ಲಿ ಪ್ರತಿ ವಿದ್ಯಾರ್ಥಿ ನಿಲಯಕ್ಕೆ 100 ಸಂಖ್ಯಾಬಲದಂತೆ ಒಟ್ಟು 10,000 ವಿದ್ಯಾರ್ಥಿಗಳಿಗೆ ಕಾಲೇಜು ವಿದ್ಯಾರ್ಥಿ ನಿಲಯಗಳನ್ನು ಬಾಲಕರಿಗಾಗಿ 40 ಬಾಲಕಿಯರಿಗಾಗಿ 60 ಹೊಸದಾಗಿ ಪ್ರಾರಂಭಿಸಲು ಹಾಗೂ ಈ ವಿದ್ಯಾರ್ಥಿ ನಿಲಯಗಳಿಗೆ ನಿಗಧಿಪಡಿಸಿದಂತೆ ಮತ್ತು ಗ್ರೂಪ್–ಡಿ ಹುದ್ದೆಗಳನ್ನು ಸೃಜಿಸಿ ಪ್ರತಿ ವಿದ್ಯಾರ್ಥಿ ನಿಲಯದ ನಿರ್ವಹಣೆ ವೆಚ್ಚಕ್ಕಾಗಿ ರೂ. 3.50 ಲಕ್ಷಗಳಂತೆ ವೆಚ್ಚ ಮಾಡಲು ಸರ್ಕಾರದ ಆದೇಶ ಹೊರಡಿಸುವಂತೆ ಹಾಗೂ ಈ ವೆಚ್ಚವನ್ನು 2008–09ನೇ ಸಾಲಿನ ರಾಜ್ಯ ಆಯವ್ಯಯ ಲೆಕ್ಕ ಶೀರ್ಷಿಕೆ 2225–01–277–0–63ರ ಯೋಜನೆಯಡಿ ಒದಗಿಸಿರುವ ರೂ. 350.00 ಲಕ್ಷಗಳಲ್ಲಿ ಮೊದಲ ಕಂತಾಗಿ ರೂ. 87.50 ಲಕ್ಷಗಳನ್ನು ಬಿಡುಗಡೆ ಮಾಡಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ಆದ್ದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 216 ಪಕವಿ 2008, ಬೆಂಗಳೂರು ದಿನಾಂಕ 4ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, 2008–09ನೇ ಸಾಲಿಗೆ ಸಮಾಜ ಕಲ್ಯಾಣ ಇಲಾಖೆಯ ಪರಿಶಿಷ್ಟ ಜಾತಿಯ ಹೊಸ ಮೆಟ್ರಿಕ್ ಪೂರ್ವ ಮತ್ತು ಮೆಟ್ರಿಕ್ ನಂತರದ ಬಾಲಕ/ಬಾಲಕಿಯರ ವಿದ್ಯಾರ್ಥಿ ನಿಲಯಗಳನ್ನು ಈ ಕೆಳಕಂಡಂತೆ ಪ್ರಾರಂಭಿಸಲು ಮಂಜೂರಾತಿ ನೀಡಿ ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ಜಿಲ್ಲೆ/ತಾಲ್ಲೂಕು ಹಾಗೂ ಸ್ಥಳಗಳ ಹೆಸರು | ವಿದ್ಯಾರ್ಥಿ ನಿಲಯ ಹೆಸರು | ವಿದ್ಯಾರ್ಥಿ ನಿಲಯಗಳ ಸಂಖ್ಯೆ | | | ಮಂಜೂರಾತಿ ಸಂಖ್ಯೆ | | |
|---|---|---|---|---|---|---|---|---|
| | | | ಬಾಲಕರು | ಬಾಲಕಿಯರು | ಒಟ್ಟು | ಬಾಲಕರು | ಬಾಲಕಿಯರು | ಒಟ್ಟು |
| 1 | 2 | 3 | 4 | 5 | 6 | 7 | 8 | 9 |
| 1 | ಬೆಂಗಳೂರು ನಗರ ಜಿಲ್ಲೆ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 2 | ಬೆಂಗಳೂರು ಉತ್ತರ ತಾ. | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 3 | ಬೆಂಗಳೂರು ದಕ್ಷಿಣ ತಾ. | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 4 | ಬೆಂಗಳೂರು ಗ್ರಾ. ಜಿಲ್ಲೆ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 5 | ರಾಮನಗರ ಜಿಲ್ಲೆ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 6 | ತುಮಕೂರು ನಗರ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 7 | ಕೊರಟಗೆರೆ ಪಟ್ಟಣ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 8 | ಪಾವಗಡ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| 9 | ಕೋಲಾರ ನಗರ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 10 | ಶ್ರೀನಿವಾಸಪುರ ಪಟ್ಟಣ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 11 | ಚಿಕ್ಕಬಳ್ಳಾಪುರ ನಗರ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 12 | ಶಿಡ್ಲಘಟ್ಟ ಪಟ್ಟಣ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 13 | ಚಿತ್ರದುರ್ಗ ನಗರ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 14 | ಚಳ್ಳಕೆರೆ ಪಟ್ಟಣ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 15 | ಮೊಳಕಾಲ್ಮೂರು | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 16 | ಹಿರಿಯೂರು | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 0 | 1 | 100 | 0 | 100 |
| 17 | ಹಿರಿಯೂರು ತಾ. (ಹಂಗಲಗೆರೆ) | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 0 | 1 | 50 | 0 | 50 |
| 18 | ಹಿರಿಯೂರು ತಾ. (ಕೋಡಿಹಳ್ಳಿ) | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 0 | 1 | 50 | 0 | 50 |
| 19 | ಹಿರಿಯೂರು ತಾ. (ಧರ್ಮಪುರ) | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 0 | 1 | 50 | 0 | 50 |
| 20 | ಹಿರಿಯೂರು ತಾ. (ಬೇತರಪಾಳ್ಯ) | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 0 | 1 | 50 | 0 | 50 |
| 21 | ಹಿರಿಯೂರು ತಾಲ್ಲೂಕು (ವಾಣಿವಿಲಾಸಪುರ) | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 22 | ದಾವಣಗೆರೆ ನಗರ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 23 | ಚೆನ್ನಗಿರಿ ಪಟ್ಟಣ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 24 | ಜಗಳೂರು ಪಟ್ಟಣ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 25 | ಶಿವಮೊಗ್ಗ ನಗರ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 26 | ಸೊರಬ ಪಟ್ಟಣ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 27 | ಹಾರೋಕೊಪ್ಪ, ಶಿಕಾರಿಪುರ ತಾ. | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 0 | 1 | 50 | 0 | 50 |
| 28 | ರೆಟ್ಟಗಹಳ್ಳಿ, ಶಿಕಾರಿಪುರ ತಾ. | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 0 | 1 | 50 | 0 | 50 |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| 29 | ತಡಸಹಳ್ಳಿ, ಶಿಕಾರಿಪುರ ತಾ. | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 0 | 1 | 50 | 0 | 50 |
| 30 | ಮೈಸೂರು ನಗರ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 31 | ಹುಣಸೂರು ಪಟ್ಟಣ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 32 | ಪಿರಿಯಾಪಟ್ಟಣ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 33 | ಟಿ. ನರಸೀಪುರ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 34 | ಚಾಮರಾಜನಗರ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 35 | ಕೊಳ್ಳೇಗಾಲ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 0 | 1 | 100 | 0 | 100 |
| 36 | ಕೊಡಗು ಟೌನ್ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 37 | ಮಂಡ್ಯ ಟೌನ್ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 38 | ನಾಗಮಂಗಲ ಪಟ್ಟಣ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 39 | ಉಡುಪಿ ಟೌನ್ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 40 | ಹಾಸನ ಟೌನ್ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 41 | ಚಿಕ್ಕಮಗಳೂರು ಟೌನ್ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 42 | ಎನ್.ಆರ್. ಪುರ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 0 | 1 | 100 | 0 | 100 |
| 43 | ತರೀಕೆರೆ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 44 | ದಕ್ಷಿಣ ಕನ್ನಡ ಜಿಲ್ಲೆ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 45 | ಬೆಳಗಾಂ ನಗರ (ದಕ್ಷಿಣ) | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 46 | ಅಥಣಿ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 47 | ಗೋಕಾಕ್ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 48 | ರಾಯಬಾಣ್ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| 49 | ಬಾಗಲಕೋಟೆ ನಗರ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 50 | ಬಾದಾಮಿ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 0 | 1 | 100 | 0 | 100 |
| 51 | ಹುನಗುಂದ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 0 | 1 | 100 | 0 | 100 |
| 52 | ಮುಧೋಳ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 0 | 1 | 100 | 0 | 100 |
| 53 | ಧಾರವಾಡ/ಹುಬ್ಬಳ್ಳಿ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 54 | ಬಿಜಾಪುರ ನಗರ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 55 | ಮುದ್ದೇಬಿಹಾಳ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 0 | 1 | 100 | 0 | 100 |
| 56 | ಬಸವನಬಾಗೇವಾಡಿ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 57 | ಇಂಡಿ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 58 | ಗದಗ ನಗರ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 59 | ಹಾವೇರಿ ನಗರ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 60 | ಸವಣೂರು | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 0 | 1 | 100 | 0 | 100 |
| 61 | ಉತ್ತರ ಕನ್ನಡ ನಗರ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 62 | ಸಿರ್ಸಿ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 63 | ಗುಲ್ಬರ್ಗಾ ನಗರ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 64 | ಜೇವರ್ಗಿ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 0 | 1 | 100 | 0 | 100 |
| 65 | ಚಿತ್ತಾಪುರ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 66 | ಕೊಪ್ಪಳ ನಗರ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 67 | ಕುಷ್ಟಗಿ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 68 | ಬೀದರ್ ನಗರ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| 69 | ಹುಮ್ನಾಬಾದ್ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 70 | ಬಳ್ಳಾರಿ ನಗರ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 71 | ರಾಯಚೂರು ನಗರ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 1 | 2 | 100 | 100 | 200 |
| 72 | ಲಿಂಗಸುಗೂರು | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| 73 | ಮಾನ್ವಿ | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 1 | 0 | 1 | 100 | 0 | 100 |
| 74 | ಸಿಂಧನೂರು | ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯ | 0 | 1 | 1 | 0 | 100 | 100 |
| | | **ಒಟ್ಟು** | **47** | **57** | **104** | **4350** | **5700** | **10050** |

ಈ ಎಲ್ಲಾ ವಿದ್ಯಾರ್ಥಿ ನಿಲಯಗಳನ್ನು 15ನೇ ಸೆಪ್ಟೆಂಬರ್ 2008ರೊಳಗೆ ಆರಂಭಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1301

**ಎ.ಎಂ. ಚಿದಾನಂದಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ-1,
ಸಮಾಜ ಕಲ್ಯಾಣ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀಮತಿ ವಿ. ಜಲಜಾಕ್ಷಿ, ಸಹಾಯಕ ಖಜಾನೆ ಅಧಿಕಾರಿ, ಖಜಾನೆ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆ - ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 5 ಎಸ್ಇಎನ್ 2001, ದಿನಾಂಕ 28-1-2004.
2) ಪ್ರಧಾನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ ಇವರ ಪತ್ರದ ಸಂಖ್ಯೆ ಎಲ್‌ಡಿ 19 ಪಿಆರ್‌ಎಸ್ 2006, ದಿನಾಂಕ 20-4-2006.
3) ನೋಟೀಸ್ ಸಂಖ್ಯೆ ಸಿಆಸುಇ 5 ಎಸ್ಇಎನ್ 2001, ದಿನಾಂಕ 10-5-2006.
4) ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರ ಪತ್ರ ಸಂಖ್ಯೆ ಪಿಎಸ್‌ಸಿ 104 ಸಿಎಸ್ಎಸ್ 2007 ದಿನಾಂಕ 13-2-2006.

**ಪ್ರಸ್ತಾವನೆ:**

ಶ್ರೀಮತಿ ವಿ. ಜಲಜಾಕ್ಷಿ, ಸಹಾಯಕ ಖಜಾನೆ ಅಧಿಕಾರಿ (ಪ್ರಸ್ತುತ ಅಮಾನತ್ತಿನಲ್ಲಿ) ಅವರು ಖಜಾನೆ ನಿರ್ದೇಶನಾಲಯದ ಹೆಚ್.ಡಿ.ಎಫ್.ಸಿ. ಶಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಮಹಾಲೇಖಪಾಲರ ಕಛೇರಿಯ ಲೆಕ್ಕಪರಿಶೋಧನಾ ತಂಡಕ್ಕೆ ಹಾಗೂ ಆ ತರುವಾಯ ಆಂತರಿಕ ಲೆಕ್ಕಪರಿಶೋಧನೆಗೆ ಲೆಕ್ಕಪತ್ರಗಳನ್ನು ಹಾಜರುಪಡಿಸದೇ ಅನಧಿಕೃತವಾಗಿ ಕಛೇರಿಗೆ ಗೈರು ಹಾಜರಾದ; ತಾನು ನಿರ್ವಹಿಸಿದ 103 ಕಡತಗಳಲ್ಲಿ ವಿಷಯ ನಿರ್ವಾಹಕರಿಗೆ ಟಿಪ್ಪಣಿಗಳನ್ನು ಬರೆದು ನಿರ್ವಹಿಸಲು ಬಿಡದೆ ತಾನೇ ನಿರ್ವಹಿಸಿದ ; ಕಡತಗಳಲ್ಲಿ ತಪ್ಪಾದ ಲೆಕ್ಕಪತ್ರಗಳನ್ನು ನಿರ್ವಹಿಸಿದ ; ತಪ್ಪು ತಪ್ಪಾಗಿ ಹಣವನ್ನು ಮರುಪಾವತಿ ಮಾಡಲು ಶಿಫಾರಸ್ಸು ಮಾಡಿ ಆದೇಶದ ಪಡೆದ ; ದುರುದ್ದೇಶದಿಂದ ಕ್ರಾಸ್ ಮಾಡದ ಚೆಕ್‌ಗಳನ್ನು ವಿತರಿಸಿ ಹಣ ದುರುಪಯೋಗಪಡಿಸಿಕೊಂಡು ಸರ್ಕಾರಕ್ಕೆ 25,50,045 ರೂಪಾಯಿಗಳನ್ನು ನಷ್ಟ ಉಂಟುಮಾಡಿದ ಇವೇ ಮೊದಲಾದ 15 ಆರೋಪಗಳಿಗಾಗಿ ಇತರರೊಡನೆ ಅವರ ವಿರುದ್ಧವೂ ಸಹ ಮೇಲೆ (1)ರಲ್ಲಿ ಓದಲಾದ ದಿನಾಂಕ 28-1-2004ರ ಸರ್ಕಾರಿ ಆದೇಶದಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀಮತಿ ವತ್ಸಲ ವತ್ಸ, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆಯನ್ನು ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ 20-4-2006ರ ವಿಚಾರಣಾ ವರದಿಯನ್ನು ಸಲ್ಲಿಸಿ ಶ್ರೀಮತಿ ವಿ. ಜಲಜಾಕ್ಷಿ, ಸಹಾಯಕ ಖಜಾನೆ ಅಧಿಕಾರಿ, ಖಜಾನೆ ಇಲಾಖೆ ಇವರ ವಿರುದ್ಧ ಆರೋಪ ಕುರಿತಂತೆ ಈ ಕೆಳಕಂಡ ನಿರ್ಣಯ ನೀಡಿದರು.

ಆರೋಪಿಯು ತಾನು ಅನಧಿಕೃತವಾಗಿ ಗೈರುಹಾಜರಾಗಿರಲಿಲ್ಲ. ಜಾಂಡೀಸ್‌ನಿಂದ ಬಳಲುತ್ತಿದ್ದ ಕಾರಣ ದಿನಾಂಕ 8–1–2001ರಿಂದ ದಿನಾಂಕ 20–2–2001ರವರೆಗೆ ವೈದ್ಯಕೀ ಪ್ರಮಾಣ ಪತ್ರದ ಆಧಾರದ ಮೇಲೆ ರಜೆ ಇದ್ದುದಾಗಿ ತಿಳಿಸಿ ಅದರ ಪ್ರತಿಗಳನ್ನು ಈಗ ಹಾಜರು ಪಡಿಸುತ್ತಿರುವುದಾಗಿ ತಿಳಿಸಿದ್ದಾರೆ. ಆದರೆ ರಜೆ ಮಂಜೂರಾಗಿರುವ ಆದೇಶವನ್ನು ಹಾಜರುಪಡಿಸಿಲ್ಲ. ಕಡತಗಳು ಕಾಣೆಯಾಗಿಲ್ಲವೆಂದು ಆರೋಪಿಯು ಹೇಳುತ್ತಾರಾದರೂ ಕಡತಗಳನ್ನು ನೋಡಿದಲ್ಲಿ ಅವು ಮರು ರಚಿಸಲ್ಪಟ್ಟ ಕಡತಗಳಾಗಿವೆ. ಅವುಗಳು ವಿಷಯ ನಿರ್ವಾಹಕರ ಬಳಿ ಇದ್ದವು ತನ್ನ ಬಳಿ ಇರಲಿಲ್ಲ ಎಂಬುದಕ್ಕೆ ಯಾವ ಪುರಾವೆಯನ್ನೂ ಆರೋಪಿಯು ಒದಗಿಸಿಲ್ಲ.

ಸಾಲವನ್ನು ಹೆಚ್.ಡಿ.ಎಫ್.ಸಿ.ಯಿಂದ ಪಡೆದಿದ್ದು ಖಜಾನೆಯು ಲೆಕ್ಕಪತ್ರಗಳನ್ನು ನಿರ್ವಹಿಸುತ್ತಿತ್ತು. ಹೀಗಾಗಿ ಹೆಚ್.ಡಿ.ಎಫ್.ಸಿ. ಅಧಿಕರಿಸಿದ ನಂತರವೇ ಮರುಪಾವತಿ ಮಾಡಬೇಕಿತ್ತು. ಆದರೆ 9 ಪ್ರಕರಣಗಳನ್ನು ಅದಿಲ್ಲದೇ ಮರುಪಾವತಿ ಮಾಡಿದ್ದು ಆರೋಪಿಯೇ ಚೆಕ್‌ಗಳನ್ನು ಬರೆದಿದ್ದಾರೆ. ಶ್ರೀ ಕೆ.ಬಿ. ರಾಮಸ್ವಾಮಿ ಅವರ ಪ್ರಕರಣದಲ್ಲಿಯೂ ಸಹ ಕ್ಯಾಲ್ಕ್ಯುಲೇಷನ್ ಶೀಟ್‌ನಲ್ಲಿ ಕೆಲವು ತಪ್ಪುಗಳಿದ್ದು ಅವುಗಳನ್ನು ತಿರಸ್ಕರಿಸಬೇಕೆಂದು ಕೋರಿದ್ದಾರೆ. ಆದರೆ ಯಾವುದೇ ಪುರಾವೆಯನ್ನೂ ಒದಗಿಸಿಲ್ಲ. ಕ್ರಾಸ್ ಮಾಡದ ಚೆಕ್‌ಗಳನ್ನು 103 ಪ್ರಕರಣಗಳಲ್ಲಿ ನೀಡಿದ ಆರೋಪ ಕುರಿತು ಲಿಖಿತ ಹೇಳಿಕೆಯಲ್ಲಿ ಆರೋಪಿಯು ಹೆಚ್.ಡಿ.ಎಫ್.ಸಿ. ಶಾಖೆಯಲ್ಲಿ ಹಿಂದೆಯಿದ್ದ ಕಾರ್ಯ ವಿಧಾನವನ್ನೇ ಪಾಲಿಸುತ್ತಿದ್ದುದಾಗಿ ತಿಳಿಸಿದ್ದಾರೆ. ಆದರೆ ಖಜಾನೆ ಇಲಾಖೆಯಲ್ಲಿ ಕ್ರಾಸ್ ಮಾಡದ ಚೆಕ್‌ಗಳನ್ನು ನೀಡುವ ಪದ್ಧತಿ ಇದೆ ಎಂಬುದನ್ನು ಒಪ್ಪಲು ಸಾಧ್ಯವಿಲ್ಲ. ಅದು ಆರ್ಥಿಕ ಸಂಹಿತೆಯ 72(ಎ) ಅನುಚ್ಛೇದದ ಉಲ್ಲಂಘನೆಯಾಗುತ್ತದೆ. ಯಾವುದೇ ಕೋರಿಕೆ ಇಲ್ಲದಿದ್ದರೂ ಲೆಕ್ಕಪತ್ರಗಳನ್ನು ಸರಿಯಾಗಿ ನಿರ್ವಹಿಸದೇ 103 ಪ್ರಕರಣಗಳಲ್ಲಿ ಸಾಲಗಾರರಿಗೆ ಮರುಪಾವತಿ ಪ್ರಕ್ರಿಯೆ ಕೈಗೊಂಡಿರುವುದು ದಾಖಲೆಗಳ ಪರಿಶೀಲನೆಯಿಂದ ಮೂಡಿಬರುತ್ತದೆ. ಲೆಡ್ಜರ್ ಹಾಗೂ ಲೆಕ್ಕಪತ್ರಗಳನ್ನು ಆರೋಪಿಯೇ ನಿರ್ವಹಿಸುತ್ತಿದ್ದು, ಇವುಗಳನ್ನು ಇಡುತ್ತಿದ್ದ ಅಲ್ಮೆರಾದ ಕೀಲಿಕೈಯನ್ನು ಆರೋಪಿ ಹೊಂದಿದ್ದು ಸಾಕ್ಷಿಗಳ ಹೇಳಿಕೆಯಿಂದ ಮೂಡಿಬರುತ್ತದೆ. 53 ಪ್ರಕರಣಗಳಲ್ಲಿ ಸಾಲಗಾರರ ಹೆಸರಿನಲ್ಲಿ ಕ್ರಾಸ್ ಮಾಡದ ಚೆಕ್‌ಗಳನ್ನು ಪಾವತಿ ಮಾಡಲಾಗಿದೆ ಎಂಬ ಆರೋಪ ಕುರಿತು 9 ಮಂದಿ ಸಾಕ್ಷಿಗಳು ನೀಡಿದ ಹೇಳಿಕೆಯಂತೆ ಅವರುಗಳಿಗೆ ಚೆಕ್‌ಗಳು ತಲುಪಿಲ್ಲ. ರವಾನೆ ಗುಮಾಸ್ತರು ನೀಡಿದೆ ಸಾಕ್ಷ್ಯದಂತೆ 5 ಪ್ರಕರಣಗಳಲ್ಲಿ ಅವರಿಗೆ ಚೆಕ್‌ಗಳನ್ನು ರವಾನಿಸಲು ನೀಡಿಲ್ಲ. ಇದನ್ನು ಆರೋಪಿಯು ವಿಚಾರಣೆ ಸಮಯದಲ್ಲಿ ನಿರಾಕರಿಸಿಲ್ಲ. ಹೆಚ್.ಡಿ.ಎಫ್.ಸಿ. ಲೆಕ್ಕಪತ್ರಗಳನ್ನು ನಿರ್ವಹಣೆ ಮಾಡುತ್ತಿದ್ದ ಆರೋಪಿಯು ಸದರಿ ಚೆಕ್‌ಗಳನ್ನು ಬರೆದು ನೀಡಿರುವುದು ಹಾಗೂ ಈ ರೀತಿ 9,16,926 ರೂಪಾಯಿಗಳನ್ನು ಪಾವತಿ ಮಾಡಿರುವುದು ವಿಚಾರಣೆಯಲ್ಲಿ ಮೂಡಿಬಂದಿದೆ. ಅನುಮೋದನೆ ಪಡೆದ ನಂತರ ಮೊತ್ತಗಳನ್ನು ಬದಲಿಸಲಾದ 4 ಪ್ರಕರಣಗಳಲ್ಲಿ ಆರೋಪಿಯೇ ಟಿಪ್ಪಣಿ ಹಾಳೆಗಳನ್ನು ಸಲ್ಲಿಸಿರುವುದು ಮೂಡಿಬಂದಿದೆ. ಶ್ರೀ ಶಿವಶಂಕರ್ ಪ್ರಕರಣದಲ್ಲಿ 9,398 ರೂಪಾಯಿಗಳಿಗೆ ಅನುಮೋದನೆ ಪಡೆದು ನಂತರ 19,398 ರೂಪಾಯಿಗಳಿಗೆ ಚೆಕ್ ಬರೆಯಲಾಗಿದೆ. ಶ್ರೀ ಬಿ.ಎಂ. ದೇವೇಗೌಡ ಪ್ರಕರಣದಲ್ಲಿ 9,188 ರೂಪಾಯಿಗಳಿಗೆ ಅನುಮೋದನೆ ಪಡೆದು 39,188 ರೂಪಾಯಿಗಳಿಗೆ ಚೆಕ್ ಬರೆಯಲಾಗಿದೆ. ಶ್ರೀಮತಿ ಹೆಚ್.ಡಿ. ಶಿವಮ್ಮ ಪ್ರಕರಣದಲ್ಲಿ 14,634 ರೂಪಾಯಿಗಳಿಗೆ ಅನುಮೋದನೆ ಪಡೆದು 15,898 ರೂಪಾಯಿಗಳಿಗೆ ಚೆಕ್ ಬರೆಯಲಾಗಿದೆ. ಶ್ರೀಮತಿ ಪಾರ್ವತಿ ಅವರಿಂದ ರೂ. 1,200 ಬಾಕಿ ಇದ್ದರೂ ಸಹ ಅವರಿಗೆ 13,800 ರೂಪಾಯಿಗಳನ್ನು ಮರುಪಾವತಿ ಮಾಡಲು ಆರೋಪಿಯು ಅನುಮೋದನೆ ಪಡೆದಿದ್ದಾರೆ. ಆರೋಪಿಯು 9 ಪ್ರಕರಣದಲ್ಲಿ ತಪ್ಪಾಗಿ ಮರುಪಾವತಿ ಮಾಡಿ 2,96,123 ರೂಪಾಯಿಗಳನ್ನು ರಾಜ್ಯದ ಬೊಕ್ಕಸಕ್ಕೆ ನಷ್ಟ ಉಂಟು ಮಾಡಿದ್ದಾರೆ ಎಂಬ ಆರೋಪ ಕುರಿತು ಪರಿಶೀಲಿಸಲಾಗಿ ಶ್ರೀ ಮಹದೇವ ಅವರು 450 ರೂಪಾಯಿಗಳನ್ನು ಹೆಚ್ಚಿಗೆ ಪಾವತಿ ಮಾಡಿದ್ದಾರೆ. ಆದರೆ ಆರೋಪಿಯು ಟಿಪ್ಪಣಿ ಹಾಳೆಯಲ್ಲಿ ಯಾವ ಸಮರ್ಥನೆಯೂ ಇಲ್ಲದೆ ಮರುಪಾವತಿ ಮಾಡಲು ಅನುಮೋದನೆ ಪಡೆದು 40,000 ರೂಪಾಯಿಗಳನ್ನು ಶ್ರೀ ಅರುಣ್‌ಕುಮಾರ್ ಎಂಬುವವರಿಗೆ ಮರು ಪಾವತಿ ಮಾಡಿದ್ದಾರೆ. ಶ್ರೀ ಮಹಾಲಿಂಗಯ್ಯ ಎಂಬುವವರು 32,900 ರೂಪಾಯಿಗಳನ್ನು ಬಡ್ಡಿಯಾಗಿ ಪಾವತಿಸಿದ್ದು ಅವರು ನಿಧನ ಹೊಂದಿರುವ ಕಾರಣ ಮರುಪಾವತಿ ಮಾಡಲು ಪ್ರಸ್ತಾಪಿಸಿದ್ದಾರೆ.

ಆದರೆ ಇದಕ್ಕೆ ಪೂರಕವಾಗಿ ಲೆಡ್ಜರ್‌ನಲ್ಲಿ ಯಾವುದೇ ನಮೂದು ಇರುವುದಿಲ್ಲ. ಶ್ರೀ ಕುರಹಟ್ಟಿ ಎಂಬುವವರು ಯಾವುದೇ ಹೆಚ್ಚುವರಿ ಪಾವತಿ ಮಾಡದಿದ್ದರೂ ಸಹ 20,000 ರೂಪಾಯಿಗಳನ್ನು ಮರುಪಾವತಿಸಲಾಗಿದೆ. ಆದರೆ ಲೆಡ್ಜರ್ ನಮೂದಿನ ಪ್ರಕಾರ ಅವರು 22,500 ರೂಪಾಯಿಗಳನ್ನು ಪಾವತಿ ಮಾಡಿದ್ದಾರೆ. ಹೆಚ್ಚುವರಿಯಾಗಿ ಮಾಡಿದ ಪಾವತಿಯನ್ನು ಮರುಪಾವತಿ ಎಂದು ತೋರಿಸಿ ಶ್ರೀ ಮೀರ್ ಮೊಹಮ್ಮದ್ ಅಲಿ ಎಂಬುವವರಿಗೆ 29,034–00 ರೂಪಾಯಿಗಳನ್ನು ಪಾವತಿಸಲಾಗಿದೆ. ಲೆಡ್ಜರ್‌ನಲ್ಲಿ ಮಾಡಲಾದ 35581 ಎಂಬ ನಮೂದನ್ನು ಕ್ರೆಡಿಟ್ ಎಂದು ತೋರಿಸಿದ್ದಾರೆ. ಶ್ರೀ ರಾಮಪ್ಪ ಎಂಬುವವರ ಪ್ರಕರಣದಲ್ಲಿ ಹೆಚ್ಚುವರಿ ಪಾವತಿ ಎಂದು 23,187–00 ರೂಪಾಯಿಗಳನ್ನು ಶ್ರೀಮತಿ ಕೆ. ರೇಣುಕ ಎಂಬುವವರಿಗೆ ಮರುಪಾವತಿ ಮಾಡಲಾಗಿದೆ. ಲೆಡ್ಜರ್‌ನಲ್ಲಿ 24,500 ರೂಪಾಯಿಗಳನ್ನು ಕ್ರೆಡಿಟ್ ಎಂದು ನಮೂದಿಸಲಾಗಿದೆ. ಲೆಡ್ಜರ್‌ನಲ್ಲಿ ಶ್ರೀ ಸಿದ್ಧರಾಜು ಅವರ ಖಾತೆಯಲ್ಲಿ 35,400 ರೂಪಾಯಿಗಳು ಜಮೆಯಾಗಿದೆ ಎಂದು ನಮೂದಿಸಲಾಗಿದೆ. ಆದರೆ ಟಿಪ್ಪಣಿಯ ಹಾಳೆಯ ಲೆಕ್ಕಾಚಾರದಲ್ಲಿ ಈ ಬಗ್ಗೆ ಉಲ್ಲೇಖವಿಲ್ಲ, ಎರಡೂ ತಾಳೆ ಆಗುತ್ತಿಲ್ಲ. ಶ್ರೀಮತಿ ಭಾಗ್ಯ ಎಂಬುವವರಿಗೆ 22,595

ರೂಪಾಯಿಗಳನ್ನು ತಪ್ಪು ಅಂಕಿ-ಅಂಶಗಳ ಆಧಾರದ ಮೇಲೆ ಮರು ಪಾವತಿ ಮಾಡಲಾಗಿದೆ. ಟಿಪ್ಪಣಿ ಹಾಳೆಯನ್ನು ನಿರ್ವಹಿಸುವ ಆರೋಪಿಯೇ ಜವಾಬ್ದಾರರು. ಲೆಡ್ಜರ್ ದಾಖಲೆಯ ಪ್ರಕಾರ ಶ್ರೀ ತಿಪ್ಪಣ್ಣ ಎಂಬ ಸಾಲಗಾರರು 18,365 ರೂಪಾಯಿಗಳನ್ನು ಪಾವತಿ ಮಾಡಿದ್ದಾರೆ ಹಾಗೂ ಅವರಿಗೆ 14,650 ರೂಪಾಯಿಗಳನ್ನು ಮರುಪಾವತಿ ಮಾಡಲಾಗಿದೆ. ಈ ನಮೂದುಗಳನ್ನು ಯಾರು ಮಾಡಿದ್ದಾರೆ ಎಂದು ಸಾಕ್ಷಿಗಳು ಹೇಳಲು ಸಾಧ್ಯವಾಗಲಿಲ್ಲವಾದರೂ ಇದರ ಕಸ್ಟೋಡಿಯನ್ ಆರೋಪಿಯೇ ಆಗಿದ್ದಾರೆ. ಇನ್ನೊಂದು ಪ್ರಕರಣದಲ್ಲಿ ಮರುಪಾವತಿಯ ಅವಶ್ಯಕತೆ ಇಲ್ಲದಿದ್ದಾಗ್ಯೂ ಸಹ 18,735 ರೂಪಾಯಿಗಳನ್ನು ಮರು ಪಾವತಿ ಮಾಡಲಾಗಿದೆ. ಆದರೆ ಲೆಡ್ಜರ್‌ನಲ್ಲಿ 10,595 ರೂಪಾಯಿಗಳ ಜಮೆಯಾಗಿರುವುದಾಗಿ ನಮೂದಿಸಿದೆ. ತಪ್ಪು ಲೆಕ್ಕಾಚಾರ ಹಾಕಿ ಈ ಮರುಪಾವತಿ ಆಗಿದೆ. ಆರ್ಥಿಕ ಸಂಹಿತೆಯ 142-ಎ ಅನುಚ್ಛೇದವನ್ನು ಉಲ್ಲಂಘಿಸಿ 90,217 ರೂಪಾಯಿಗಳನ್ನು ಮರುಪಾವತಿ ಮಾಡಲಾದ 3 ಪ್ರಕರಣಗಳ ಪೈಕಿ ಒಂದು ಪ್ರಕರಣದಲ್ಲಿ ಸಾಲಗಾರರೇ ನೀಡಿದ ಲೆಕ್ಕಾಚಾರದಂತೆ 3,815 ರೂಪಾಯಿಗಳು ಮಾತ್ರ ಮರುಪಾವತಿಯಾಗಬೇಕಿದೆ. ಆದರೆ ಆರೋಪಿಯು ತಪ್ಪು ಅಂಕಿ ಅಂಶಗಳನ್ನು ಸಲ್ಲಿಸಿ ಒಮ್ಮೆ 10,112 ರೂಪಾಯಿಗಳನ್ನು ಹಾಗೂ ಇನ್ನೊಮ್ಮೆ 8,889 ರೂಪಾಯಿಗಳನ್ನು ಮರು ಪಾವತಿ ಮಾಡಿದ್ದಾರೆ. ಇನ್ನೊಂದು ಪ್ರಕರಣದಲ್ಲಿ 21,690 ಮತ್ತು 21,745 ರೂಪಾಯಿಗಳನ್ನು ಪಾವತಿಸಿದ್ದಾರೆ. ಆದರೆ ವಾಸ್ತವವಾಗಿ ಪಾವತಿಸಬೇಕಾಗಿದ್ದು 8,288 ರೂಪಾಯಿಗಳು ಮಾತ್ರ. ಆದರೆ ಆರೋಪಿಯು ವಾದವನ್ನು ಮಂಡಿಸಿ ಜಂಟಿ ನಿರ್ದೇಶಕರು ಹಾಗೂ ನಿರ್ದೇಶಕರ ಅನುಮೋದನೆ ಪಡೆದ ನಂತರವೇ ಮರುಪಾವತಿ ಮಾಡಿರುವುದಾಗಿ ತಿಳಿಸಿದ್ದಾರೆ. ಮತ್ತೊಂದರಲ್ಲಿ 7,496 ರೂಪಾಯಿಗಳನ್ನು ಪಾವತಿಸಬೇಕಾದ ಕಡೆ 30,804 ರೂಪಾಯಿಗಳನ್ನು ಪಾವತಿಸಲಾಗಿದೆ. ಶ್ರೀ ಎನ್. ನಾಗೇಂದ್ರರಾವ್ ಎಂಬುವವರಿಗೆ 35,450 ರೂಪಾಯಿಗಳನ್ನು ಪಾವತಿಸಲು ಆರೋಪಿಯು ನಿರ್ದೇಶಕರಿಂದ ಅನುಮೋದನೆಯನ್ನು ಪಡೆದಿದ್ದರು. ಆದರೆ ಆನಂತರ ಮತ್ತೆ ಕಡತವನ್ನು ಸಲ್ಲಿಸಿ ಶ್ರೀ ಕೆ.ಎಸ್. ಶ್ಯಾಮಸುಂದರ್ ಎಂಬುವವರಿಗೆ ಪಾವತಿ ಮಾಡಲು ಅನುಮೋದನೆ ಪಡೆದು ಪಾವತಿ ಮಾಡಿದ್ದಾರೆ. ಯಾವ ಕಾರಣಕ್ಕೆ ಪಾವತಿ ಮಾಡಲಾಗುತ್ತಿದೆ ಎಂಬ ಕಾರಣವನ್ನು ನೀಡಿಲ್ಲ. ಲೆಕ್ಕಪತ್ರದಂತೆ ಶ್ರೀ ಹೆಚ್.ಡಿ. ಶಿವಣ್ಣ ಎಂಬ ಸಾಲಗಾರರಿಂದ 2,940 ರೂಪಾಯಿಗಳು ವಸೂಲಾಗಬೇಕಾಗಿದೆ. ಆದರೆ ವಾಸ್ತವದಲ್ಲಿ ಶ್ರೀ ಶಿವಮ್ಮ ಎಂಬುವವರಿಗೆ 1,5898 ರೂಪಾಯಿಗಳ ಚೆಕ್‌ನ್ನು ನೀಡಲಾಗಿದೆ. ಅಸಲಿಗೆ ಈ ಚೆಕ್‌ನ್ನು ಶ್ರೀಮತಿ ಶಿವಮ್ಮ ಅವರು ಸ್ವೀಕರಿಸಿಯೇ ಇಲ್ಲ. ಇವೆಲ್ಲವನ್ನು ಆರೋಪಿಯೇ ನಿರ್ವಹಿಸಿದ್ದಾರೆ. ಸತ್ತವರ ಹೆಸರಿನ್ಲಲಿ 4 ಪ್ರಕರಣಗಳಲ್ಲಿ 94,230 ರೂಪಾಯಿಗಳ ಚೆಕ್‌ನ್ನು ನೀಡಲಾಗಿದೆ. ಶ್ರೀ ಕೃಷ್ಣಪ್ಪ ಅವರ ಪ್ರಕರಣದಲ್ಲಿ 25,480 ರೂಪಾಯಿ, ಶ್ರೀ ರಾಮಚಂದ್ರಪ್ಪ ಅವರ ಪ್ರಕರಣದಲ್ಲಿ 30,800 ರೂಪಾಯಿ, ಶ್ರೀ ಕೆ.ಆರ್. ಸತ್ಯನಾರಾಯಣಮೂರ್ತಿ ಅವರ ಪ್ರಕರಣದಲ್ಲಿ 25,250 ರೂಪಾಯಿ, ಶ್ರೀ ಅಬ್ದುಲ್‌ಘನೀಖಾನ್ ಪ್ರಕರಣದಲ್ಲಿ 12,700 ರೂಪಾಯಿಗಳನ್ನು ಮರುಪಾವತಿ ಮಾಡಲಾಗಿದೆ. ಇವುಗಳ ಟಿಪ್ಪಣಿಗಳಲ್ಲಿ ಮೇಲಧಿಕಾರಿಗಳಿಗೆ ತಪ್ಪು ಮಾಹಿತಿ ನೀಡಿ ಅಕ್ರಮ ಎಸಗಲಾಗಿದೆ.

ಶ್ರೀ ಹೆಚ್. ಪ್ರಭಾಕರ್ ಎಂಬುವವರಿಂದ 6,673 ರೂಪಾಯಿಗಳು ಸರ್ಕಾರಕ್ಕೆ ಬಾಕಿ ಇದ್ದರೂ ಸಹ ಮೇಲಧಿಕಾರಿಗಳ ಅನುಮೋದನೆ ಪಡೆಯದೇ 22,324 ರೂಪಾಯಿಗಳನ್ನು ಅವರಿಗೆ ಮರುಪಾವತಿ ಮಾಡಲಾಗಿದೆ. ಶ್ರೀ ಮೊಹಮದ್ ಶೌಕತ್ ಆಲಿ ಅವರಿಂದ 7,040 ರೂಪಾಯಿಗಳು ಬಾಕಿ ಇದ್ದರೂ ಸಹ ಅವರಿಗೆ 15,070 ರೂಪಾಯಿಗಳನ್ನು ಮರುಪಾವತಿ ಮಾಡಲಾಗಿದೆ. ಶ್ರೀಮತಿ ರೇಣುಕ ಎಂಬುವವರಿಂದ 20,202 ರೂಪಾಯಿಗಳ ಬಾಕಿ ಇದ್ದರೂ ಸಹ ಅವರಿಗೆ 5,450 ರೂಪಾಯಿಗಳನ್ನು ಮರುಪಾವತಿ ಮಾಡಲಾಗಿದೆ.

ಶ್ರೀ ಎಂ. ರಾಮಕೃಷ್ಣ ಎಂಬುವವರಿಂದ 10,616 ರೂಪಾಯಿಗಳು ಬಾಕಿ ಇದ್ದರೂ ಸಹ ಅವರಿಗೆ 8,090 ರೂಪಾಯಿಗಳನ್ನು ಮರುಪಾವತಿ ಮಾಡಲಾಗಿದೆ. ಶ್ರೀ ಟಿ.ಎ. ಶಿವಸ್ವಾಮಿ ಎಂಬುವವರಿಂದ 14,097 ರೂಪಾಯಿಗಳ ಬಾಕಿ ಇದ್ದರೂ ಸಹ ಅವರಿಗೆ 10,792 ರೂಪಾಯಿಗಳನ್ನು ಮರುಪಾವತಿ ಮಾಡಲಾಗಿದೆ. ಶ್ರೀ ವಿನಯಚಂದ್ರ ಎಂಬುವವರು 24,986 ರೂಪಾಯಿಗಳನ್ನು ಪಾವತಿಸಬೇಕಿದ್ದರೂ ಸಹ ಅವರಿಗೆ 5,072 ರೂಪಾಯಿಗಳನ್ನು ಮರುಪಾವತಿ ಮಾಡಲಾಗಿದೆ. ಈ ಮೂಲಕ ಆರ್ಥಿಕ ಸಂಹಿತೆಯ 217(9)ನೇ ಅನುಚ್ಛೇದವನ್ನು ಆರೋಪಿಯು ಉಲ್ಲಂಘಿಸಿದ್ದಾರೆ. ವಿಚಾರಣೆ ಸಮಯದಲ್ಲಿ ಈ ಆರೋಪವನ್ನು ಆರೋಪವನ್ನು ನಿರಾಕರಿಸಿಲ್ಲ. ಆದ್ದರಿಂದ 15 ಆರೋಪಗಳಲ್ಲಿ 2 ರಿಂದ 4, 6, 8 ರಿಂದ 15ರವರೆಗಿನ ಆರೋಪಗಳು ಪೂರ್ಣವಾಗಿ 1ನೇ ಆರೋಪದ 4ನೇ ಪ್ರಕರಣದ ಪೈಕಿ ಮೊದಲ 2 ಹಾಗೂ 5 ಭಾಗಶಃ ಸಾಭೀತಾಗಿದೆ.

ಮೇಲಿನ ವಿಚಾರಣಾ ವರದಿಯ ಪ್ರತಿಯನ್ನು ಲಗತ್ತಿಸಿ ಶ್ರೀಮತಿ ವಿ. ಜಲಜಾಕ್ಷಿ, ಸಹಾಯಕ ಖಜಾನೆ ಅಧಿಕಾರಿ, ಖಜಾನೆ ಇಲಾಖೆ ಇವರಿಗೆ ಮೇಲೆ (3)ರಲ್ಲಿ ಓದಲಾದ ದಿನಾಂಕ 10-5-2006ರ ಎರಡನೇ ನೋಟೀಸ್ ನೀಡಿ ವಿಚಾರಣಾ ವರದಿಯ ಬಗ್ಗೆ ಏನಾದರೂ ಅಹವಾಲು ಇದ್ದಲ್ಲಿ ಸಲ್ಲಿಸಲು ಅವಕಾಶವನ್ನು ಕಲ್ಪಿಸಲಾಯಿತು. ನೋಟೀಸನ್ನು ಸ್ವೀಕರಿಸಿದ ಆರೋಪಿಯು ಯಾವುದೇ ಉತ್ತರವನ್ನು ನೀಡಿಲ್ಲ. ಪ್ರಕರಣವನ್ನು ಪರಿಶೀಲಿಸಲಾಗಿ ವಿಚಾರಣೆ ಸಂದರ್ಭದಲ್ಲಿ ಆರೋಪಿಯು ವಿಚಾರಣಾಧಿಕಾರಿಗಳ ಮುಂದೆ ಹಾಜರಾಗಿ ತಮ್ಮ ವಾದವನ್ನು ಮಂಡಿಸಿದ್ದಾರೆ. ಶಿಸ್ತು ಪ್ರಾಧಿಕಾರದ ಪರವಾಗಿ ಹಾಜರಾದ ಸಾಕ್ಷಿಗಳನ್ನು ಪಾಟಿ ಸವಾಲಿಗೆ ಒಳಪಡಿಸಿದ್ದಾರೆ. ಕಡತಗಳಲ್ಲಿನ ಅವರ ಟಿಪ್ಪಣಿ, ಆರ್ಥಿಕ ಸಂಹಿತೆಯ ಅನುಚ್ಛೇದಗಳ ಉಲ್ಲಂಘನೆ, ಕ್ರಾಸ್ ಮಾಡದ ಚೆಕ್‌ಗಳನ್ನು ತಾವೇ ಬರೆದು ನೀಡಿರುವುದು, ವಿಷಯ ನಿರ್ವಾಹಕರಿಂದ ಪ್ರಸ್ತಾವನೆಗಳನ್ನು

ಸಲ್ಲಿಕೆಯಾಗಲು ಬಿಡದೇ ತಮ್ಮ ಹಂತದಲ್ಲೇ ಟಿಪ್ಪಣಿ ದಾಖಲಿಸಿರುವುದು, ಮೇಲಧಿಕಾರಿಗಳಿಂದ ಅನುಮೋದನೆ ಪಡೆದು ಆನಂತರ ಚೆಕ್‌ಗಳಲ್ಲಿನ ಮೊತ್ತವನ್ನು ತಿದ್ದಿರುವುದು, ಇವುಗಳನ್ನೆಲ್ಲಾ ಶಿಸ್ತು ಪ್ರಾಧಿಕಾರದ ಪರವಾಗಿ ಒಳಪಡಿಸಲಾದ ಸಾಕ್ಷಿಗಳ ಮರು ವಿಚಾರಣೆ ಸಂದರ್ಭದಲ್ಲಿ ಅವರು ಎಸಗಿದ ಅಕ್ರಮಗಳು ನಿರೂಪಿಸಲ್ಪಟ್ಟಾಗ ಮೌನ ವಹಿಸಿದ್ದಾರೆ. ಆರೋಪ 1 ಹಾಗೂ 5 ಭಾಗಶಃ ಸಾಭೀತಾಗಿದೆ.14 ಆರೋಪಗಳನ್ನು ಕ್ರೋಢೀಕರಿಸಿ 15ನೇ ಆರೋಪವನ್ನು ಮಾಡಲಾಗಿದೆ. 7ನ್ನು ಬಿಟ್ಟು ಉಳಿದ ಆರೋಪಗಳು ಸಾಭೀತಾಗಿವೆ. ಆರೋಪಿಯು ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡುವಂತಹ ತೀವ್ರ ದುರ್ನಡತೆ ಎಸಗಿರುವುದು ಮೂಡಿಬಂದಿದ್ದು ಸಾಬೀತಾದ ಆರೋಪದಂತೆ ಆರೋಪಿಯು ದುರ್ನಡತೆಯಿಂದಾಗಿ ಸರ್ಕಾರಕ್ಕೆ 10,38,353 ರೂಪಾಯಿಗಳ ಆರ್ಥಿಕ ನಷ್ಟ ಉಂಟಾಗಿದೆ. ಆದ್ದರಿಂದ ವಿಚಾರಣಾ ವರದಿಯನ್ನು ಒಪ್ಪಿಕೊಂಡ ಸರ್ಕಾರವು ಆಯೋಗದ ಸಹಮತಿಯೊಡನೆ ದಂಡನೆ ವಿಧಿಸಲು ನಿರ್ಣಯಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 5 ಎಸ್‌ಇಎನ್ 2001 ಬೆಂಗಳೂರು, ದಿನಾಂಕ 26ನೇ ಜುಲೈ 2008.**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 11, 11ಎ ರೊಡನೆ ಓದಿಕೊಂಡಂತೆ ಅದೇ ನಿಯಮಾವಳಿಯ ನಿಯಮ 8(vi)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀಮತಿ ವಿ. ಜಲಜಾಕ್ಷಿ, ಸಹಾಯಕ ಖಜಾನಾಧಿಕಾರಿ, ಖಜಾನೆ ಇಲಾಖೆ, ಬೆಂಗಳೂರು ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುತ್ತದೆ ಹಾಗೂ ಅವರ ದುರ್ನಡತೆಯಿಂದ ಸರ್ಕಾರಕ್ಕೆ ಉಂಟಾದ ಆರ್ಥಿಕ ನಷ್ಟ ರೂ. 10,38,353–00ಗಳನ್ನು ಹಣ ಪಾವತಿಯಾದ ದಿನಾಂಕದಿಂದ ಇಂದಿನವರೆಗೆ ಶೇಕಡ 8ರಷ್ಟು ಬಡ್ಡಿಯೊಡನೆ ವಸೂಲು ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1125

**ಎಂ. ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸು ಇಲಾಖೆ (ಸೇವೆಗಳು–3)

**ವಿಷಯ:** ಶ್ರೀಮತಿ ಅನಿತಾ ಬಾಲಕೃಷ್ಣ, ಐ.ಎ. & ಎ.ಎಸ್. ನಿಯೋಜನೆ ಮೇಲೆ ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ), ಆರ್ಥಿಕ ಇಲಾಖೆ ಇವರ ನಿಯೋಜನಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1) ಅಧಿಸೂಚನೆ ಸಂಖ್ಯೆ ಸಿಆಸುಇ 330 ಎಸ್‌ಜಿಓ 2007, ದಿನಾಂಕ 9–10–2007.
2) ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 330 ಎಸ್‌ಜಿಓ 2007, ದಿನಾಂಕ 16–4–2008.
3) ಕಾರ್ಯದರ್ಶಿ (ಆ ಮತ್ತು ಸಂ), ಆರ್ಥಿಕ ಇಲಾಖೆ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ ಆಇ 129 ಸಮನ್ವಯ 2008 ದಿನಾಂಕ 19–9–2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಶ್ರೀಮತಿ ಅನಿತಾ ಬಾಲಕೃಷ್ಣ, ಐ.ಎ. & ಎ.ಎಸ್. ಅವರನ್ನು ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯಲ್ಲಿನ ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ) ಈ ಹುದ್ದೆಯಲ್ಲಿ ನಿಯೋಜನೆ ಮೇರೆಗೆ ಒಂದು ವರ್ಷದ ಅವಧಿಗೆ ನೇಮಿಸಲಾಗಿತ್ತು. ಅದರಂತೆ ಅವರು ದಿನಾಂಕ 14–10–2007ರಂದು ಸದರಿ ಹುದ್ದೆಯಲ್ಲಿ ಅಧಿಕಾರ ವಹಿಸಿಕೊಂಡರು.

ಕಾರ್ಯದರ್ಶಿ, ಆರ್ಥಿಕ ಇಲಾಖೆ (ಆಯವ್ಯಯ ಮತ್ತು ಸಂಪನ್ಮೂಲ) ಇವರು ಮೇಲೆ (3)ರಲ್ಲಿ ಓದಲಾದ ಅರೆ ಸರ್ಕಾರಿ ಪತ್ರದಲ್ಲಿ ಶ್ರೀಮತಿ ಅನಿತಾ ಬಾಲಕೃಷ್ಣ, ಐ.ಎ.&ಎ.ಎಸ್. ಅವರ ಸೇವೆಯು ಇನ್ನೂ ಆರ್ಥಿಕ ಇಲಾಖೆಗೆ ಅವಶ್ಯಕವಾಗಿರುವುದರಿಂದ ಅವರ ನಿಯೋಜನಾ ಅವಧಿಯನ್ನು ದಿನಾಂಕ 15–10–2008ರಿಂದ ಮತ್ತೆ ಒಂದು ವರ್ಷದ ಅವಧಿಗೆ ವಿಸ್ತರಿಸುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 811 ಸಅಸೇ 2008 ಬೆಂಗಳೂರು, ದಿನಾಂಕ 20ನೇ ಅಕ್ಟೋಬರ್ 2008.**

ಶ್ರೀಮತಿ ಅನಿತಾ ಬಾಲಕೃಷ್ಣ, ಐ.ಎ. & ಎ.ಎಸ್. ನಿಯೋಜನೆ ಮೇಲೆ ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ), ಆರ್ಥಿಕ ಇಲಾಖೆ ಇವರ ನಿಯೋಜನಾ ಅವಧಿಯನ್ನು ದಿನಾಂಕ 15–10–2008ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 330 ಎಸ್‌ಜಿಓ 2007, ದಿನಾಂಕ 16–4–2008ರಲ್ಲಿ ವಿಧಿಸಿರುವ ಷರತ್ತು ಮತ್ತು ನಿಬಂಧನೆಗಳು ಮುಂದುವರೆದ ಅವಧಿಗೂ ಅನ್ವಯವಾಗುತ್ತವೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ ಆಇ 1 ಟಿಎಫ್‌ಪಿ 96, ದಿನಾಂಕ 10-7-1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1468

**ಎಂ. ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸು ಇಲಾಖೆ (ಸೇವೆಗಳು-3)

**ವಿಷಯ:** ಶ್ರೀ ಎಂ.ಸಿ. ಪೂಣಚ್ಚ, ನಿವೃತ್ತ ಅಧೀನ ಕಾರ್ಯದರ್ಶಿ ಇವರ ನಿವೃತ್ತಿ ಉಪದಾನದ ಮೇಲೆ ಬಡ್ಡಿಯನ್ನು ಪಾವತಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 57 ಸೇಇನಿ 2006, ದಿನಾಂಕ 18-1-2008.

2) ಖಜಾನೆ ನಿರ್ದೇಶಕರು, ಖಜಾನೆ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ದಿನಾಂಕ 11-7-2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ದಿನಾಂಕ 31-8-2006ರಂದು ವಯೋ ನಿವೃತ್ತಿ ಹೊಂದಿರುವ ಶ್ರೀ ಎಂ.ಸಿ. ಪೂಣಚ್ಚ, ನಿವೃತ್ತ ಅಧೀನ ಕಾರ್ಯದರ್ಶಿ ಇವರಿಗೆ ವಿಳಂಬವಾಗಿ ಪಾವತಿಸಲಾದ ನಿವೃತ್ತಿ ಉಪದಾನದ ಮೊತ್ತ ರೂ. 1,39,479-00ರ ಮೇಲೆ ಶೇಕಡ 8ರಂತೆ ಬಡ್ಡಿಯನ್ನು ದಿನಾಂಕ 1-12-2006ರಿಂದ ದಿನಾಂಕ 30-9-2007ರವರೆಗಿನ ಅವಧಿಗೆ ಮಂಜೂರು ಮಾಡುವಂತೆ ಆದೇಶಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ವಿಳಂಬವಾಗಿ ಪಾವತಿಯಾದ ನಿವೃತ್ತಿ ಸೌಲಭ್ಯದ ಮೇಲಿನ ಬಡ್ಡಿ ಪಾವತಿಯ ಸರ್ಕಾರಿ ಆದೇಶವು 2007-08ನೇ ಆಯವ್ಯಯ ಸಾಲಿನದಾಗಿದ್ದು, ಆದೇಶದ ಅವಧಿಯು ವ್ಯಪಗತವಾಗಿದ್ದು, ಸದರಿ ಆದೇಶವನ್ನು 2008-09ನೇ ಸಾಲಿಗೆ ಪರಿಷ್ಕರಿಸಿ ಆದೇಶ ಹೊರಡಿಸಲು ಖಜಾನೆ ನಿರ್ದೇಶಕರು, ಕೋರಿರುತ್ತಾರೆ. ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 57 ಸೇಇನಿ 2006 ಬೆಂಗಳೂರು, ದಿನಾಂಕ 17ನೇ ಅಕ್ಟೋಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಶ್ರೀ ಎಂ.ಸಿ. ಪೂಣಚ್ಚ, ನಿವೃತ್ತ ಅಧೀನ ಕಾರ್ಯದರ್ಶಿ ಅವರಿಗೆ ವಿಳಂಬವಾಗಿ ಪಾವತಿ ಮಾಡಲ್ಪಟ್ಟ ನಿವೃತ್ತಿ ಸೌಲಭ್ಯಗಳ ಮೇಲೆ ಬಡ್ಡಿ ಪಾವತಿಸಲು ಮಂಜೂರು ಮಾಡಿದ ದಿನಾಂಕ 18-1-2008ರ ಸರ್ಕಾರಿ ಆದೇಶವನ್ನು 2008-09ನೇ ಸಾಲಿಗೆ ನವೀಕರಿಸುತ್ತದೆ.

ಆರ್ಥಿಕ ಇಲಾಖೆಯ ಸಹಮತಿಯನ್ನು ಅ.ಟಿ. ಸಂಖ್ಯೆ ಆಇ (ವಿ) 3 ಪಿಇಟಿ 2008, ದಿನಾಂಕ 22-8-2008 ಹಾಗೂ ಆಇ 1769 ವೆಚ್ಚ-5 2008, ದಿನಾಂಕ 27-9-2008ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1469

**ಎಂ. ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸು ಇಲಾಖೆ (ಸೇವೆಗಳು-3)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಆಯೋಗ ಕೋಶಕ್ಕೆ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆಃಸಿಆಸುಇ 167 ಸಅಸೇ 97 ದಿನಾಂಕ 30-03-1998.

2) ಸರ್ಕಾರದ ಕಾರ್ಯದರ್ಶಿ (ಆಯವ್ಯಯ ಮತ್ತು ಸಂಪನ್ಮೂಲ) ಆರ್ಥಿಕ ಇಲಾಖೆ ಇವರ ಅ.ಸ. ಪತ್ರ ಸಂಖ್ಯೆಃ ಎಫ್‌ಡಿ 06 ಎಫ್‌ಸಿಸಿ 07 ದಿನಾಂಕಃ 07-01-2008.

3) ಸರ್ಕಾರದ ಅಪರ ಕಾರ್ಯದರ್ಶಿ, ಆರ್ಥಿಕ ಇಲಾಖೆ, ಆರ್ಥಿಕ ಆಯೋಗ ಕೋಶ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆಃ ಆಇ 06 ಆಆಕೋ 07 ಎಫ್‌ಸಿಸಿ 08 ದಿನಾಂಕಃ 25-04-2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ 30-03-1998ರ ಸರ್ಕಾರಿ ಆದೇಶದಲ್ಲಿ ಇತರೆ ಹುದ್ದೆಗಳೊಂದಿಗೆ ಈ ಕೆಳಕಂಡ ಹೆಚ್ಚುವರಿ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿತ್ತು. ತದನಂತರ ಈ ಹುದ್ದೆಗಳನ್ನು ಮುಂದುವರಿಸಿರುವುದಿಲ್ಲ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1) | ಸಹಾಯಕ ಸಾಂಖ್ಯಿಕ ಅಧಿಕಾರಿ/ಸಹಾಯಕ ನಿರ್ದೇಶಕರು (ಸಾಂಖ್ಯಿಕ)/ ಅಕೌಂಟ್ಸ್ ಆಫೀಸರ್ | 2 ಹುದ್ದೆಗಳು |
| 2) | ಡಾಟಾ ಎಂಟ್ರಿ ಆಪರೇಟರ್ | 2 ಹುದ್ದೆಗಳು |
| 3) | ದಲಾಯತ್ | 1 ಹುದ್ದೆ |
| | **ಒಟ್ಟು** | **5 ಹುದ್ದೆಗಳು** |

ಮೇಲೆ (2 ಮತ್ತು 3) ರಲ್ಲಿ ಓದಲಾದ ಅ.ಸ. ಪತ್ರ ಮತ್ತು ಟಿಪ್ಪಣಿಗಳಲ್ಲಿ 13ನೇ ಹಣಕಾಸಿನ ಆಯೋಗ ರಚನೆಯಾಗಿದ್ದು, ಅದರ ಕೆಲಸಕಾರ್ಯಗಳು ಪ್ರಾರಂಭವಾಗಿ ಕೆಲಸದ ಒತ್ತಡ ಹೆಚ್ಚುತ್ತಿರುವುದರಿಂದ ಮಾಹಿತಿಯನ್ನು ಸರ್ಕಾರದ ಎಲ್ಲಾ ಇಲಾಖೆಗಳಿಂದ ಪಡೆದು ಕ್ರೋಢೀಕರಿಸಿ 13ನೇ ಹಣಕಾಸಿನ ಆಯೋಗ, ನವದೆಹಲಿಗೆ ಕಳುಹಿಸಬೇಕಾಗಿರುವುದರಿಂದ ಮೇಲ್ಕಂಡ ಹುದ್ದೆಗಳನ್ನು ಹೊಸದಾಗಿ ಸೃಜಿಸಿ ಮುಂದುವರಿಸುವಂತೆ ಕೋರಿದ್ದಾರೆ.

ಅದರಂತೆ ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 117 ಸಅಸೇ 2008, ಬೆಂಗಳೂರು, ದಿನಾಂಕ 1ನೇ ಸೆಪ್ಟೆಂಬರ್ 2008.**

ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಆಯೋಗ ಕೋಶಕ್ಕೆ ಈ ಕೆಳಕಂಡ ಹುದ್ದೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ 13ನೇ ಆರ್ಥಿಕ ಆಯೋಗದ ಕಾರ್ಯವನ್ನು ಪೂರ್ಣಗೊಳಿಸುವ ಅವಧಿಯವರೆಗೆ ಅಂದರೆ ದಿನಾಂಕ: 31–03–2015 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ. ಹಾಗೂ ಸದರಿ ಹುದ್ದೆಗಳನ್ನು ನಿಯೋಜನೆ ಆಧಾರದ ಮೇಲೆ ತುಂಬಿಕೊಳ್ಳಲು ಆದೇಶಿಸಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1) | ಸಹಾಯಕ ಸಾಂಖ್ಯಿಕ ಅಧಿಕಾರಿ/ಸಹಾಯಕ ನಿರ್ದೇಶಕರು (ಸಾಂಖ್ಯಿಕ)/ ಅಕೌಂಟ್ಸ್ ಆಫೀಸರ್ | 2 ಹುದ್ದೆಗಳು |
| 2) | ಡಾಟಾ ಎಂಟ್ರಿ ಆಪರೇಟರ್ | 1 ಹುದ್ದೆ |
| 3) | ದಲಾಯತ್ | 1 ಹುದ್ದೆ |
| | **ಒಟ್ಟು** | **4 ಹುದ್ದೆಗಳು** |

ಈ ಆದೇಶವನ್ನು ದಿನಾಂಕ 28–07–2008 ಸಂಖ್ಯೆ: ಆಇ 1141 ವೆಚ್ಚ–5/2008 ರಲ್ಲಿ ಆರ್ಥಿಕ ಇಲಾಖೆಯು ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1258

**ಎಂ. ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸು ಇಲಾಖೆ (ಸೇವೆಗಳು–3)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 40 ಸಸಿವಿ 2006 ದಿನಾಂಕ: 29–05–2006.
2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 90 ಸಸಿವಿ 2006 ದಿನಾಂಕ: 02–12–2006.
3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 507 ಸಅಸೇ 2007 ದಿನಾಂಕ:02–11–2007.
4) ಪ್ರಧಾನ ಕಾರ್ಯದರ್ಶಿಗಳು (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ), ಕೃಷಿ ಮತ್ತು ತೋಟಗಾರಿಕೆ ಇಲಾಖೆ ಇವರ ಟಿಪ್ಪಣಿ ಸಂಖ್ಯೆ: ಕೃತೋಇ 14 ಪ್ರಕಾ (ಆಸಂ) 2008 ದಿ: 13–06–08.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶ ದಿನಾಂಕ; 29–05–2006ರಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 01–04–2005 ರಿಂದ 31–03–2007 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ದಿನಾಂಕಃ 02–12–2006ರ ಸರ್ಕಾರಿ ಆದೇಶದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯೆಂದು ಮರುಪದನಾಮೀಕರಿಸಿ ದಿನಾಂಕಃ 06–07–2007 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದ್ದು, ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರಿಸಿರುವುದಿಲ್ಲ. ಮೇಲೆ (3) ರಲ್ಲಿ ಓದಲಾದ ದಿನಾಂಕಃ 02–11–2007ರ ಸರ್ಕಾರಿ ಆದೇಶದಲ್ಲಿಯೂ ಸಹ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ex-cadre ಮಾಡಿದ ದಿನಾಂಕಃ 06–07–2007 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

ಮೇಲೆ (4) ರಲ್ಲಿ ಓದಲಾದ ದಿನಾಂಕಃ 13–06–2008ರ ಟಿಪ್ಪಣಿಯಲ್ಲಿ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕಃ 06–07–2008 ರಿಂದ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರಿಸುವಂತೆ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಇವರು ಕೋರಿದ್ದಾರೆ. ಅದರಂತೆ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 581 ಸಅಸೇ 2008 ಬೆಂಗಳೂರು, ದಿನಾಂಕಃ 24ನೇ ಜುಲೈ 2008**

ಕರ್ನಾಟಕ ಸರ್ಕಾರ ಸಚಿವಾಲಯದ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಹುದ್ದೆಯನ್ನು ದಿನಾಂಕಃ06–07–2008 ರಿಂದ ದಿನಾಂಕಃ 05–07–2009 ರವರೆಗೆ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕಃ 01–04–2007 ರಿಂದ ದಿನಾಂಕಃ 05–07–2009 ರವರೆಗೆ ಮುಂದುವರಿಸಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10–07–1996 ರಲ್ಲಿ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1126

**ಎಂ. ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸು ಇಲಾಖೆ (ಸೇವೆಗಳು–3)

**ವಿಷಯ:** ದೇವನಹಳ್ಳಿ ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣದ ಶಿಷ್ಟಾಚಾರ ವಿಭಾಗಕ್ಕೆ ಸಿಬ್ಬಂದಿ ಸೃಜಿಸುವ ಬಗ್ಗೆ.

**ಓದಲಾಗಿದೆ:** ಕಡತ ಸಂಖ್ಯೆಃ ಡಿಪಿಎಆರ್ 525 ಹೆಚ್‌ವಿಪಿ 2007 (ಭಾ).

**ಪ್ರಸ್ತಾವನೆ ಃ**

ದೇವನಹಳ್ಳಿ ಬೆಂಗಳೂರಿನಲ್ಲಿ ಹೊಸದಾಗಿ ಪ್ರಾರಂಭವಾದ ಅಂತರರಾಷ್ಟ್ರೀಯ ವಿಮಾನ ನಿಲ್ದಾಣದಲ್ಲಿ ರಾಜ್ಯಕ್ಕೆ ಆಗಮಿಸುವ ಸರ್ಕಾರದ ಅತಿಥಿಗಳು/ ವಿದೇಶಿ ಅತಿಥಿಗಳಿಗೆ ಯಾವುದೇ ರೀತಿಯಲ್ಲಿ ತೊಂದರೆಯಾಗದಂತೆ ಅವರುಗಳನ್ನು ಬರಮಾಡಿಕೊಂಡು ಪುನ: ಅವರನ್ನು ಬೀಳ್ಕೊಡುವವರೆವಿಗೂ ಅತಿಥಿ ಕಾರ್ಯವನ್ನು ನಿರ್ವಹಿಸಲು ವಿಮಾನ ನಿಲ್ದಾಣದಲ್ಲಿ ಪೂರ್ಣ ಪ್ರಮಾಣದ ರಾಜ್ಯ ಶಿಷ್ಟಾಚಾರ ಕಛೇರಿ ಕಾರ್ಯನಿರ್ವಹಿಸಲು ಅನುವಾಗುವಂತೆ ಈ ಕೆಳಕಂಡ ಹುದ್ದೆಗಳನ್ನು ಸೃಜಿಸುವುದು ಅಗತ್ಯವಾಗಿರುತ್ತದೆ.

| ಕ್ರ.ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ | ಭರಿಸುವ ವಿಧಾನ |
|---|---|---|---|
| 1) | ಸರ್ಕಾರದ ಅಧೀನ ಕಾರ್ಯದರ್ಶಿ | 2 ಹುದ್ದೆಗಳು | Redeployment |
| 2) | ಶಾಖಾಧಿಕಾರಿ | 3 ಹುದ್ದೆಗಳು | |
| 3) | ಸಹಾಯಕರು | 3 ಹುದ್ದೆಗಳು | |
| 4) | ಗ್ರೂಪ್–ಡಿ | 6 ಹುದ್ದೆಗಳು | |
| 5) | ವಾಹನ ಚಾಲಕರು | 3 ಹುದ್ದೆಗಳು | Outsourcing |
| | **ಒಟ್ಟು** | **17 ಹುದ್ದೆಗಳು** | |

ಅದರಂತೆ ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 307 ಸಅಸೇ 2008, ಬೆಂಗಳೂರು, ದಿನಾಂಕ 16ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣದಿಂದಾಗಿ ನೂತನವಾಗಿ ಪ್ರಾರಂಭವಾದ ದೇವನಹಳ್ಳಿ ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣದ ರಾಜ್ಯ ಶಿಷ್ಟಾಚಾರ ಕಛೇರಿಗೆ ಕೆಳಕಂಡಂತೆ ಸಿಬ್ಬಂದಿಗಳನ್ನು ಸೃಜಿಸಲಾಗಿದೆ.

| ಕ್ರ.ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ | ಭರಿಸುವ ವಿಧಾನ |
|---|---|---|---|
| 1) | ಸರ್ಕಾರದ ಅಧೀನ ಕಾರ್ಯದರ್ಶಿ | 2 ಹುದ್ದೆಗಳು | Redeployment |
| 2) | ಶಾಖಾಧಿಕಾರಿ | 3 ಹುದ್ದೆಗಳು | |
| 3) | ಸಹಾಯಕರು | 3 ಹುದ್ದೆಗಳು | |
| 4) | ಗ್ರೂಪ್–ಡಿ | 6 ಹುದ್ದೆಗಳು | |
| 5) | ವಾಹನ ಚಾಲಕರು | 3 ಹುದ್ದೆಗಳು | Outsourcing |
| | **ಒಟ್ಟು** | **17 ಹುದ್ದೆಗಳು** | |

ಈ ಆದೇಶವನ್ನು ದಿನಾಂಕಃ 16–06–2008 ಸಂಖ್ಯೆಃ ಎಫ್‌ಡಿ 1030 ವೆಚ್ಚ–5/2008 ರಲ್ಲಿ ಆರ್ಥಿಕ ಇಲಾಖೆಯು ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1086

**ಎಂ. ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸು ಇಲಾಖೆ (ಸೇವೆಗಳು–3)

## PERSONNEL AND ADMINISTRATIVE REFORMS SECRETARIAT

**Subject** Terms and conditions of contract appointment of Dr. K.V. Raju, Economic Advisor to Chief Minister.

**Read** Notification No. DPAR 492 SGO 2008 dated:10.06.2008.

**PREAMBLE :**

In the Notification dated 10.06.2008 read above, Dr. K.V. Raju, Professor, ISEC has been appointed on contract basis as Economic Advisor to Chief Minister.

The question of prescribing the terms and conditions of contract appointment of Dr. K.V. Raju, Economic Advisor to Chief Minister has been examined and hence the following order.

**Government Order No. DPAR 492 SGO 2008, BANGALORE, DATED: 23RD August 2008.**

The terms and conditions for contract appointment of Dr. K.V. Raju, Economic Advisor to Chief Minister are indicated hereunder:-

**1) PERIOD OF CONTRACT :**

The period of contract of Dr. K.V. Raju, Economic Advisor to Chief Minister shall be for a period of one year or to be co-terminus with the office of the Chief Minister or so long as the service of Dr. K.V. Raju are required in the said office whichever is earlier.

**2) THE COMMENCEMENT AND TERMINATION OF CONTRACT :**

The contract will commence on the date on which he takes charge in the State Government and ends on the date on which he hands over charge in State Government.

**3) PAY AND OTHER ALLOWANCES :**

During the period of contract he shall entitled to pay including DA/HRA/CCA admisible to him in his parent organization. He shall be entitled to Special pay admissible to the post on Chief Minister's Secretariat. However he shall not be entitled to pay other deputation or Foreign Service allowance. He will also not be eligible for special allowances like lunch allowance/overtime allowance/Bonus/Ex-gratia etc., attached to the post in his parent organization.

**4) LEAVE RULES. :**

He will be governed by the leave rules applicable to him in the parent organization.

**5) TRAVELLING ALLOWANCE :**

For journeys undertaken in public interest, he shall be entitled to receive T.A. and D.A. as per the State rules under State Government.

**6) P.F. CONTRIBUTIONS :**

12% of Basic Pay shall be deducted from the salary of the employee every month and remitted to ISEC together with employers contribution at 12% of Basic Pay by the State Government.

7) **GRATUITY FUND CONTRIBUTION:**

Government shall pay contribution towards service gratuity at the rate of 8.33% of the annual remuneration.

8) **LIC PENSION ANNUITY SCHEMES:**

5% contribution by the State Government (employer) and 5% subscription by the employee.

9) **GROUP INSURANCE SCHEME:**

Rs.280/- shall be payable by the employee towards the Group Insurance Scheme.

10) **MEDICAL CONCESSION :**

The Official shall be entitled to the Medical attendance as per the Karnataka Government Servants (Medical Attendance) Rules 1963.

11) He shall perform the functions of advisor and attend to all work entrusted to him from time to time by the Chief Minister.

12) He shall perform his duties diligently and he shall maintain strict secrecy in respect of official information which he comes to know in the course of his duties.

13) He shall be liable to reimburse to Government all the losses which the Government may sustain due to mis-conduct of any sort on his part.

This order issues with the concurrence of Finance Department vide U.O. Note No: FD 1661 Expenditure-5/2008, dated: 22.08.2008

By order and in the name of Governor of Karnataka

P.R. 1232

**M.S. SHIVARAM**

Under Secretary to Government,
Department of Personnel and
Administrative Reforms (Services-3).

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ಸಂಖ್ಯೆ: ಆಕುಕ 341 ಎಂಪಿಎಸ್ 2008, ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್ 2008.**

**ಸೇರ್ಪಡೆ**

ಸರ್ಕಾರದ ಆದೇಶ ಸಂಖ್ಯೆ: ಆಕುಕ 341 ಎಂಪಿಎಸ್ 2008, ದಿನಾಂಕ 19–8–2008ರ ಆದೇಶ ಭಾಗದ 6ರ ಷರತ್ತು ಮತ್ತು ನಿಬಂಧನೆ ನಂತರ ಈ ಕೆಳಗಿನದನ್ನು "7ನೇ ಷರತ್ತು ಮತ್ತು ನಿಬಂಧನೆ" ಎಂದು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

7. ಪರಸ್ಪರ ವರ್ಗಾವಣೆಗೆ ಅರ್ಜಿ ಸಲ್ಲಿಸುವ ಪ್ರತಿಯೊಬ್ಬ ವಿದ್ಯಾರ್ಥಿಯಿಂದ ತಲಾ ರೂ. 1,000.00 (ರೂಪಾಯಿ ಒಂದು ಸಾವಿರ ಮಾತ್ರ) ಗಳನ್ನು ವರ್ಗಾವಣಾ ಶುಲ್ಕವಾಗಿ ಪಡೆದು ಸರ್ಕಾರದ ನಿಧಿಗೆ ಜಮಾ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1288

**ವಿ. ಶ್ರೀರಾಮರೆಡ್ಡಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯಃ** ಶ್ರೀ ಎನ್ ಉಮಾಪತಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು - ಇವರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವ ಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆಃ**
1. ದಿನಾಂಕಃ 06-06-07 ರ ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ 239 ಎಸ್ಇಎನ್ 06.
2. ವಿಚಾರಣಾಧಿಕಾರಿಯವರ ವರದಿ ದಿನಾಂಕಃ 28-06-08.
3. ವಿಚಾರಣಾಧಿಕಾರಿಯವರ ಮನವಿ ದಿನಾಂಕಃ 28-06-08.

**ಪ್ರಸ್ತಾವನೆಃ**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ, ಶ್ರೀ ಜಿ ಎಸ್ ಜಿದ್ದಿಮನಿ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಇವರು ಈ ಹಿಂದೆ ಚಾಮರಾಜನಗರ ತಾಲ್ಲೂಕಿನ ತಹಶೀಲ್ದಾರರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಕರಿನಂಜನಾಪುರ ಗ್ರಾಮದ ಸರ್ವೆ ನಂ 91/1, 91/2, 93/4 ಮತ್ತು 94/1 ರಲ್ಲಿನ ಒಟ್ಟು 06-34 ಎಕರೆ ಜಮೀನನ್ನು ಶ್ರೀ ಎನ್ ರಾಜಶೇಖರಮೂರ್ತಿ ಬಿನ್ ಕೆ ಸಿ ನಾಗಣ ಎಂಬುವವರ ಹೆಸರಿಗೆ ಅನ್ಯಕ್ರಾಂತ ಮಂಜೂರು ಆದೇಶ ಮಾಡುವಾಗ, ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961 ರ ಕಲಂ 63, 79-A. 79-B ಮತ್ತು 80 ಗಳ ಉಲ್ಲಂಘನೆಯಾಗಿದೆಯೇ ಅಥವಾ ಇಲ್ಲವೆ ಎಂಬ ಬಗ್ಗೆ ಪರಿಶೀಲಿಸದೆ, ನಗರ ಯೋಜನಾ ಪ್ರಾಧಿಕಾರದ ಅಭಿಪ್ರಾಯ ಪಡೆಯದೇ ಅನ್ಯಕ್ರಾಂತ ಮಂಜೂರು ಆದೇಶ ಮಾಡಿ ಕರ್ನಾಟಕ ನಾಗರೀಕ ಸೇವೆ (ನಡತೆ) ನಿಯಮಾಳಿಯನ್ನು ಉಲ್ಲಂಘಿಸಿ, ಕರ್ತವ್ಯ ನಿರ್ವಹಣೆಯಲ್ಲಿ ಲೋಪವೆಸಗುವ ಮೂಲಕ ಎಸಗಿದ ದುರ್ನಡತೆ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆಯ ಮೂಲಕ ತಿಳಿಯುವ ಸಲುವಾಗಿ, ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ ನಿಯಮ 11 (2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಆರೋಪದ ಬಗ್ಗೆ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಶ್ರೀ ಎನ್ ಉಮಾಪತಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕಃ 28-06-08 ರಂದು ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಮನವಿಯಲ್ಲಿ ವಿಚಾರಣಾಧಿಕಾರಿಯವರು ಗೌರವ ಧನ ಹಾಗೂ ಪ್ರಯಾಣ ಭತ್ಯೆ ಮಂಜೂರು ಮಾಡುವಂತೆ ಕೋರಿರುತ್ತಾರೆ. ಈ ಸಂಬಂಧ ಇವರಿಗೆ ಗೌರವ ಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡಬೇಕಾಗಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 306 ಸೇಇವಿ 07, ಬೆಂಗಳೂರು, ದಿನಾಂಕಃ 2ನೇ ಸೆಪ್ಟೆಂಬರ್, 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರವು, ಶ್ರೀ ಎನ್ ಉಮಾಪತಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರಿಗೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸಲ್ಲಿಸಿದ್ದಕ್ಕಾಗಿ ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ 016 ಸೇಇವಿ 05, ದಿನಾಂಕಃ 23-08-05 ರನ್ವಯ ರೂ. 6000-00 (ಆರು ಸಾವಿರ ರೂಪಾಯಿಗಳು ಮಾತ್ರ) ಗೌರವಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ 045 ಸೇಇವಿ 01, ದಿನಾಂಕಃ 04-03-02 ರನ್ವಯ ರೂ. 1000-00 (ಒಂದು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಪ್ರಯಾಣ ಭತ್ಯೆಯನ್ನು ಪಾವತಿಸಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ ಕ2052-ಸಚಿವಾಲಯ-ಸಾಮಾನ್ಯ ಸೇವೆಗಳು-090-ಸಚಿವಾಲಯ-01, ಕರ್ನಾಟಕ ಸರ್ಕಾರ ಸಚಿವಾಲಯ-051-ಸಾಮಾನ್ಯ ವೆಚ್ಚಗಳು" ರಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1373

**ಎಚ್ ಆರ್ ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು-2)

**ವಿಷಯಃ** ಶ್ರೀ ಬಿ ಹೆಚ್ ಸಿದ್ದಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಹಿಂದಿನ ಉಪ ವಿಭಾಗಾಧಿಕಾರಿಗಳು, ಹಾವೇರಿ (ಹಾಲಿ ಸಹಾಯಕ ಕಾರ್ಯದರ್ಶಿ, ಬೀದರ್ ಜಿಲ್ಲಾ ಪಂಚಾಯತ್, ಬೀದರ್) ಇವರು ಗೊತ್ತಾದ ಆದಾಯ ಮೀರಿ ಸಂಪತ್ತು ಹೊಂದಿರುವ ಕುರಿತು ಸಕ್ಷಮ ನ್ಯಾಯಾಲಯದಲ್ಲಿ (Attatchment) ಜಪ್ತಿ ಮಾಡುವ ಕುರಿತು ಅನುಜ್ಞಾ ಪತ್ರ ನೀಡುವ ಕುರಿತು.

**ಓದಲಾಗಿದೆಃ** ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆಃ LOK/INV (G)/CTL-19/CR-4/2005, Davanagere, ದಿನಾಂಕಃ 10-07-2008

**ಪ್ರಸ್ತಾವನೆಃ**

ಶ್ರೀ ಬಿ ಹೆಚ್ ಸಿದ್ದಪ್ಪ, ಕೆಎಎಸ್ (ಕಿರಿಯ ಶ್ರೇಣಿ), ಸಹಾಯಕ ಕಾರ್ಯದರ್ಶಿ, ಬೀದರ್ ಜಿಲ್ಲಾ ಪಂಚಾಯತ್, ಬೀದರ್ ಇವರು ಈ ಹಿಂದೆ ಉಪ ವಿಭಾಗಾಧಿಕಾರಿ, ಹಾವೇರಿ ಉಪ ವಿಭಾಗ, ಹಾವೇರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಇವರು ಗೊತ್ತಾದ ಆದಾಯ ಮೂಲಕ್ಕಿಂತ ಹೆಚ್ಚಿನ ಆಸ್ತಿಪಾಸ್ತಿಗಳನ್ನು ಅಕ್ರಮವಾಗಿ ಗಳಿಸಿರುತ್ತಾರೆಂಬ ಖಚಿತ ಮಾಹಿತಿಯ ಮೇರೆಗೆ ಸದರಿ ಆರೋಪಿತ ಅಧಿಕಾರಿಯ ವಿರುದ್ಧ ದಾವಣಗೆರೆ ಲೋಕಾಯುಕ್ತ ಠಾಣೆ ಮೊಕದ್ದಮೆ ಸಂಖ್ಯೆಃ 4/2005 ರಲ್ಲಿ ದಿನಾಂಕಃ 14-11-05 ರಂದು ಪ್ರಕರಣ ದಾಖಲಿಸಿ, ದಿನಾಂಕಃ 15-11-05 ರಂದು ಪಂಚರುಗಳ ಸಮಕ್ಷಮ ಆರೋಪಿತರಿಗೆ ಸಂಬಂಧಿಸಿದ ಮನೆ / ಕಟ್ಟಡಗಳು, ಕಛೇರಿ ಮುಂತಾದ ಸ್ಥಳಗಳ ಪರಿಶೋಧನೆಯನ್ನು ಲೋಕಾಯುಕ್ತ ಪೋಲೀಸರು ಮಾಡಿದ್ದು, ಮುಂದಿನ ತನಿಖೆ ಕೈಗೊಳ್ಳಲಾಗಿದೆ.

ಪ್ರಕರಣದ ಈವರೆಗಿನ ತನಿಖೆಯಿಂದ ಆರೋಪಿತ ಅಧಿಕಾರಿ ಶ್ರೀ ಬಿ ಹೆಚ್ ಸಿದ್ದಪ್ಪ ರವರು ತಮ್ಮ ಗೊತ್ತಾದ ಆದಾಯ ಮೂಲಕ್ಕಿಂತ ಹೆಚ್ಚಿನ ಚರ ಮತ್ತು ಸ್ಥಿರಾಸ್ತಿಗಳನ್ನು ಹೊಂದಿರುವುದು ಧೃಡಪಟ್ಟಿದ್ದು (ಇದರ ವಿವರಗಳನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನೀಡಲಾಗಿದೆ) ಸದರಿ ಚರ ಮತ್ತು ಸ್ಥಿರಾಸ್ತಿಗಳನ್ನು ಸರ್ಕಾರವು ಮುಟ್ಟುಗೋಲು ಹಾಕಿಕೊಳ್ಳುವ ಅವಶ್ಯಕತೆ ಇರುತ್ತದೆ ಎಂದು ಹಾಗೂ ಈ ಬಗ್ಗೆ ಸಕ್ಷಮ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಬೇಕಾಗಿದ್ದು, ಈ ಸಂಬಂಧವಾಗಿ The Criminal Law Amendment Ordinance, 1944 ರ ಕಲಂ 3 ರಡಿ ಅನುಜ್ಞಾ ಪತ್ರವನ್ನು ನೀಡುವಂತೆ ಮೇಲೆ ಓದಲಾದ ಪತ್ರದಲ್ಲಿ ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಕೋರಿರುವರು. ಇವರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಪರಿಗಣಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 254 ಕೆಇವಿ 07, ಬೆಂಗಳೂರು, ದಿನಾಂಕಃ 14ನೇ ಅಕ್ಟೋಬರ್ 08**

ಮೇಲೆ ಪ್ರಸ್ತಾವನೆಯಲ್ಲಿ ಪರಿಶೀಲಿಸಿರುವಂತೆ, ಶ್ರೀ ಬಿ ಹೆಚ್ ಸಿದ್ದಪ್ಪ, ಕೆಎಎಸ್ (ಕಿರಿಯ ಶ್ರೇಣಿ), ಸಹಾಯಕ ಕಾರ್ಯದರ್ಶಿ, ಬೀದರ್ ಜಿಲ್ಲಾ ಪಂಚಾಯತ್,ಬೀದರ್ ಇವರು ಈ ಹಿಂದೆ ಉಪ ವಿಭಾಗಾಧಿಕಾರಿ, ಹಾವೇರಿ ಉಪ ವಿಭಾಗ, ಹಾವೇರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಇವರು ಗೊತ್ತಾದ ಆದಾಯ ಮೂಲಕ್ಕಿಂತ ಹೆಚ್ಚಿನ ಆಸ್ತಿಪಾಸ್ತಿಗಳನ್ನು ಅಕ್ರಮವಾಗಿ ಗಳಿಸಿರುವ ಮಾಹಿತಿಯನ್ನು ಆಧರಿಸಿ, ಕರ್ನಾಟಕ ಲೋಕಾಯುಕ್ತ ಪೋಲೀಸರು ಆರೋಪಿತ ಅಧಿಕಾರಿಯ ವಿರುದ್ಧ ದಾವಣಗೆರೆ ಲೋಕಾಯುಕ್ತ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆಃ 4/2005 ಅನ್ನು ದಿನಾಂಕಃ 14-11-05 ರಂದು ದಾಖಲಿಸಿ, ದಿನಾಂಕಃ 15-11-05 ರಂದು ಪಂಚರುಗಳ ಸಮಕ್ಷಮ ಆರೋಪಿತರಿಗೆ ಸಂಬಂಧಿಸಿದ ಮನೆ / ಕಟ್ಟಡಗಳು, ಕಛೇರಿ ಮುಂತಾದ ಸ್ಥಳಗಳ ಪರಿಶೋಧನೆ ಮಾಡಿದಾಗ, ಇವರು ಗೊತ್ತಾದ ಆದಾಯ ಮೂಲಕ್ಕಿಂತ ಹೆಚ್ಚಿನ ಸಂಪತ್ತು ಹೊಂದಿರುವುದು ಕಂಡುಬಂದಿದ್ದು, ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನೀಡಲಾಗಿರುವ ವಿವರಗಳುಳ್ಳ ಈ ಆಸ್ತಿಗಳನ್ನು ಆರೋಪಿತ ಅಧಿಕಾರಿಯು ವಿಲೇ ಮಾಡುವ ಬಗ್ಗೆ ಗುಮಾನಿ ಇರುವುದರಿಂದ, The Criminal Law Amendment Ordinance, 1944 ರ ಕಲಂ 3 ರಡಿ ಇವುಗಳನ್ನು ಜಪ್ತಿ (Attatchment) ಮಾಡುವ ಸಲುವಾಗಿ, ಸಕ್ಷಮ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಲು ಈ ಮೂಲಕ ಸರ್ಕಾರದ ಅನುಮೋದನೆಯನ್ನು ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್ ಆರ್ ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು-2)

**ದಿನಾಂಕ: 14ನೇ ಅಕ್ಟೋಬರ್ 08ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 254 ಕೆಇವಿ 07ಕ್ಕೆ ಅನುಬಂಧ**

| ಕ್ರಮ ಸಂಖ್ಯೆ | ಆಸ್ತಿಯ ವಿವರಗಳು | ಮೌಲ್ಯ ರೂಪಾಯಿಗಳಲ್ಲಿ |
|---|---|---|
| 1 | ನಿವೇಶನ ಸಂಖ್ಯೆ: 1697/21–22, 4ನೇ ಕ್ರಾಸ್ ತರಳಬಾಳು ಬಡಾವಣೆ, ದಾವಣಗೆರೆ, ಈ ಆಸ್ತಿಯು ಆರೋಪಿತರ ಸಂದೆ ಶ್ರೀ ಹಾಲಪ್ಪ ರವರ ಹೆಸರಿನಲ್ಲಿರುತ್ತದೆ. | ರೂ. 157000–00 |
| 2 | ಮನೆ ನಂ. 1697/21–22, 4ನೇ ಕ್ರಾಸ್ ತರಳಬಾಳು ಬಡಾವಣೆ, ದಾವಣಗೆರೆ, ಈ ಆಸ್ತಿಯು ಆರೋಪಿತರ ಸಂದೆ ಶ್ರೀ ಹಾಲಪ್ಪ ರವರ ಹೆಸರಿನಲ್ಲಿರುತ್ತದೆ. | ರೂ. 2690000–00 |
| 3 | ಕುರ್ಕಿ, ದಾವಣಗೆರೆ ತಾಲ್ಲೂಕು ಇಲ್ಲಿನ ರಿ.ಸ. ನಂ. 44/3, 44/2p ಮತ್ತು 44/2 p ರಲ್ಲಿ 6 ಎಕರೆ ಜಮೀನು, ಇದು ಆರೋಪಿತರ ಅತ್ತೆ ಶ್ರೀಮತಿ ಗೌರಮ್ಮ ಇವರ ಹೆಸರಿನಲ್ಲಿರುತ್ತದೆ. | 45000–00 |
| 4 | Syndicate Bank, Basaveshwara Circle, Bangalore SB A/c No. 04482010050843 ಇದು ಆರೋಪಿತರ ಹೆಸರಿನಲ್ಲಿರುತ್ತದೆ. | 1548–00 |
| 5 | Canara Bank, Mandibete Branch, Davanagere SB A/c. No. 44275 ಇದು ಆರೋಪಿತರ ಹೆಸರಿನಲ್ಲಿರುತ್ತದೆ. | 5639–00 |
| 6 | Canara Bank, Manaipete Branch, Davanagere SB A/c No. 44151 ಇದು ಆರೋಪಿತರ ಹೆಸರಿನಲ್ಲಿರುತ್ತದೆ. | 5846–00 |

| ಕ್ರಮ ಸಂಖ್ಯೆ | ಆಸ್ತಿಯ ವಿವರಗಳು | ಮೌಲ್ಯ ರೂಪಾಯಿಗಳಲ್ಲಿ |
|---|---|---|
| 7 | Millath Co-op Bank Ltd., PB Road Branch SB A/c No. 2080 ಇದು ಆರೋಪಿತರ ಪುತ್ರಿ ಡಾ: ಮೈತ್ರಿ ರವರ ಹೆಸರಿನಲ್ಲಿರುತ್ತದೆ. | 6670–00 |
| 8 | ಬಾಪೂಜಿ ವಿದ್ಯಾನಗರ ಅಂಚೆ ಕಛೇರಿ, ದಾವಣಗೆರೆ ಇಲ್ಲಿ ಖರೀದಿಸಿದಾಗ NSC | 50000–00 |
| 9 | Honda Activa Two Wheeler vehicle No. KA 17 U 3705 ಇದು ಆರೋಪಿತರ ಪುತ್ರಿ ಡಾ: ಮೈತ್ರಿ ರವರ ಹೆಸರಿನಲ್ಲಿರುತ್ತದೆ. | 36928–00 |
| 10 | Maruti Zen car No. KA 06 Z 6363 ಇದು ಆರೋಪಿತರ ಪುತ್ರಿ ಡಾ: ಮೈತ್ರಿ ರವರ ಹೆಸರಿನಲ್ಲಿರುತ್ತದೆ. | 433470–00 |
| 11 | Canara Bank, Vinoba Nagar, Davanagere Locker No. 126 ರಲ್ಲಿದ್ದ 451 ಗ್ರಾಂ ಬೆಳ್ಳಿ ವಸ್ತುಗಳು ಇದು ಆರೋಪಿತರ ಪುತ್ರಿ ಡಾ: ಮೈತ್ರಿ ರವರ ಹೆಸರಿನಲ್ಲಿರುತ್ತದೆ. | 3523–00 |
| 12 | ಚಿನ್ನಾಭರಣಗಳು ಒಟ್ಟು 183 ಗ್ರಾಂ | 101034–00 |
| 13 | ಬೆಳ್ಳಿ ವಸ್ತುಗಳ ಮೌಲ್ಯ ಒಟ್ಟು 8 ಕೆ.ಜಿ. 881 ಗ್ರಾಂ | 87902–00 |

**ಎಚ್ ಆರ್ ನಾಗೇಂದ್ರ**

ಪಿ.ಆರ್. 1470

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು-2)

**ವಿಷಯಃ** ಶ್ರೀ ಬಿ ಹೆಚ್ ಸಿದ್ದಪ್ಪ, ಹಿಂದಿನ ಉಪ ವಿಭಾಗಾಧಿಕಾರಿಗಳು, ಕಂದಾಯ ಇಲಾಖೆ, ಹಾವೇರಿ (ಹಾಲಿ ಸಹಾಯಕ ಕಾರ್ಯದರ್ಶಿ, ಬೀದರ್ ಜಿಲ್ಲಾ ಪಂಚಾಯತ್, ಬೀದರ್) ಇವರ ವಿರುದ್ಧ ದಾಖಲಾದ ಅಕ್ರಮ ಆಸ್ತಿ ಹೊಂದಿರುವ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಉಲ್ಲೇಖಃ**
1) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆಃ LOK/INV (G)/CTL-19/CR-4/2005, Davanagere, ದಿನಾಂಕಃ 26-05-2008
2) ತನಿಖಾಧಿಕಾರಿಯವರ ವರದಿ ಸಂಖ್ಯೆಃ LOK/DVG/DYSP/CR No.04/2005, ದಿನಾಂಕಃ 13-05-08
3) ತನಿಖಾ ದಿಖಲೆಗಳಾದ ಪ್ರಥಮ ವರ್ತಮಾನ ವರದಿ, ಶೋಧನಾ ಪಂಚನಾಮೆಗಳು ಮತ್ತು ತನಿಖಾಧಿಕಾರಿಯ ಅಂತಿಮ ವರದಿಯ ಕಡತಗಳು

**ಪ್ರಸ್ತಾವನೆಃ**

ಶ್ರೀ ಬಿ ಹೆಚ್ ಸಿದ್ದಪ್ಪ, ಹಿಂದಿನ ಉಪ ವಿಭಾಗಾಧಿಕಾರಿಗಳು, ಕಂದಾಯ ಇಲಾಖೆ, ಹಾವೇರಿ (ಹಾಲಿ ಸಹಾಯಕ ಕಾರ್ಯದರ್ಶಿ, ಬೀದರ್ ಜಿಲ್ಲಾ ಪಂಚಾಯತ್, ಬೀದರ್) ಇವರ ವಿರುದ್ಧ ಗುನ್ನೆ ಸಂಖ್ಯೆಃ 04/2005 ರಲ್ಲಿ ಪೋಲೀಸ್ ನಿರೀಕ್ಷಕರು, ಪೋಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ದಾವಣಗೆರೆ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿಯ ನಕಲು (ಉಲ್ಲೇಖ-2) ಮತ್ತು ತನಿಖಾ ದಾಖಲಾತಿಗಳನ್ನು ಅಪರ ಪೋಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕಃ 26-05-08 (ಉಲ್ಲೇಖ-1 ರೊಡನೆ) ಕಳುಹಿಸುತ್ತಾ, ಆಪಾದಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ, 1988 ರ 19 (1)(ಬಿ) ಕಲಂನಡಿಯಲ್ಲಿ ಮಂಜೂರಾತಿಗಾಗಿ ಈ ಪ್ರಾಧಿಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು, ಅಪರ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ (ಉಲ್ಲೇಖ-1) ಪತ್ರ ಸಂಖ್ಯೆಃ LOK/INV (G)/CTL-19/CR-4/2005, ದಾವಣಗೆರೆ, ದಿನಾಂಕಃ 26-05-2008 ರೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1. ಪ್ರಥಮ ವರ್ತಮಾನ ವರದಿ ದಿನಾಂಕಃ 14-11-2005
2. ಶೋಧನಾ ಪಂಚನಾಮೆಗಳುಃ
   a) ದಿನಾಂಕಃ 15-11-2005 ರಂದು ಆಪಾದಿತ ವಾಸವಾಗಿದ್ದ ಮನೆ ನಂ 1697/21-22, ದಾವಣಗೆರೆ ಮನೆಯ ಶೋಧನಾ ಪಂಚನಾಮೆ.

b) ದಿನಾಂಕಃ 15-11-2005 ರಂದು ಆಪಾದಿತನು ಕರ್ತವ್ಯ ನಿರ್ವಹಿಸುತ್ತಿದ್ದ ಉಪ ವಿಭಾಗಾಧಿಕಾರಿಗಳ ಕಛೇರಿ, ಹಾವೇರಿಯ ಶೋಧನಾ ಪಂಚನಾಮೆ
c) ದಿನಾಂಕಃ 15-11-2005 ರಂದು ಆಪಾದಿತನು ವಾಸ್ತವ್ಯವಿದ್ದ ಉಪ ವಿಭಾಗಾಧಿಕಾರಿಗಳ ಸರ್ಕಾರಿ ವಸತಿ ಗೃಹ, ಹಾವೇರಿಯ ಶೋಧನಾ ಪಂಚನಾಮೆ
d) ದಿನಾಂಕಃ 26-11-2005 ರಂದು ಆಪಾದಿತರ ಮಗಳಾದ ಡಾಃ ಮೈತ್ರಿ ಇವರು ಕೆನರಾ ಬ್ಯಾಂಕ್, ವಿನೋಬನಗರ, ದಾವಣಗೆರೆ ಇಲ್ಲಿ ಹೊಂದಿದ್ದ ಲಾಕರ್ ನಂ 126 ರ ಶೋಧನಾ ಪಂಚನಾಮೆ

3. ತನಿಖಾಧಿಕಾರಿಯ ಅಂತಿಮ ವರದಿ ದಿನಾಂಕಃ 13-05-2008
4. ತನಿಖಾಧಿಕಾರಿಯ ಅಂತಿಮ ವರದಿಗೆ ಅನುಬಂಧಿಸಿರುವ ಈ ಕೆಳಕಂಡ ಕಡತಗಳು
a) ಕಡತ ಸಂಖ್ಯೆ-3 - ಆಪಾದಿತರು ತನಿಖಾ ಕಾಲದಲ್ಲಿ ಸಲ್ಲಿಸಿಕೊಂಡಿರುವ ಷೆಡ್ಯೂಲ್ ನಮೂನೆ-1 ರಿಂದ 23 ರವರೆಗಿನ ಭರ್ತಿ ಮಾಡಿದ ನಮೂನೆಗಳು ಹಾಗೂ ಆಪಾದಿತ ಮತ್ತು ಅವರ ತಂದೆ ಹಾಗೂ ಮಗಳಾದ ಡಾಃ ಮೈತ್ರಿ ಇವರು ತನಿಖಾಧಿಕಾರಿಗೆ ಸಲ್ಲಿಸಿರುವ ಪತ್ರಗಳ ಕಡತ - ಹಾಳೆ ಸಂಖ್ಯೆಃ 1 ರಿಂದ 49
b) ಕಡತ ಸಂಖ್ಯೆ-4 - ಸರ್ಕಾರದಿಂದ ಪಡೆದಿರುವ ಆಪಾದಿತರ 1993-94 ನೇ ವರ್ಷದಿಂದ 2004-05 ರವರೆಗಿನ ಅವಧಿಯ ಆಸ್ತಿ-ಋಣ ತಃಖ್ತೆಗಳು ಮತ್ತು ಅಸ್ತಿ-ಋಣ ತಃಖ್ತೆಗಳ ಬಗ್ಗೆ ಅಧಿಕಾರಿಗಳಿಂದ ಪಡೆದಿರುವ ಪತ್ರಗಳು - ಹಾಳೆ ಸಂಖ್ಯೆಃ 1 ರಿಂದ 46
c) ಕಡತ ಸಂಖ್ಯೆ-5 - ಆಪಾದಿತರು ತನ್ನ ತಂದೆ ಹೆಸರಿನಲ್ಲಿ ಹೊಂದಿರುವ ದಾವಣಗೆರೆ ನಿವೇಶನ ನಂ. 1697/21-22 ಮತ್ತು ಸದರಿ ನಿವೇಶನದಲ್ಲಿ ನಿರ್ಮಿಸಿರುವ ಮನೆ, ಆಪಾದಿತರು ತನ್ನ ಅತ್ತೆ ಶ್ರೀಮತಿ ಗೌರಮ್ಮ ಇವರ ಹೆಸರಿನಲ್ಲಿ ಖರೀದಿಸಿರುವ ಜಮೀನುಗಳು, ಆಪಾದಿತರು ತನ್ನ ಅತ್ತೆ ಶ್ರೀಮತಿ ಗೌರಮ್ಮ, ತಾಯಿ ಲಕ್ಕಮ್ಮ, ತಂದೆ ಹಾಲಪ್ಪ ಇವರ ಹೆಸರುಗಳಲ್ಲಿ ಖರೀದಿಸಿ ವಿಲೇವಾರಿ ಮಾಡಿದ ನಿವೇಶನಗಳ ದಸ್ತಾವೇಜುಗಳು, ಆಪಾದಿತರು ವಿವಿಧ ಬ್ಯಾಂಕುಗಳಲ್ಲಿ ಹೊಂದಿರುವ ಖಾತಾ ವಿವರಗಳು, ಆಪಾದಿತರು ತನ್ನ ತಂದೆಯ ಹೆಸರಿನಲ್ಲಿ ಖರೀದಿಸಿರುವ ಎನ್ ಎಸ್ ಸಿ ಗಳು ಮತ್ತು ಷೇರುಗಳು, ವಿಮಾ ಪಾಲಿಸಿಗಳ ದಾಖಲೆಗಳು, ವಿದ್ಯುತ್ ಸಂಪರ್ಕ ಮತ್ತು ದೂರವಾಣಿ ಸಂಪರ್ಕದ ದಾಖಲೆಗಳು, ವಾಹನಗಳ ದಾಖಲೆಗಳು, ವಿಮಾ ಪಾಲಿಸಿಗಳು ಹಾಗೂ ವಿವಿಧ ಕಂಪನಿಗಳಿಂದ ಪಡೆದಿರುವ ಸಾಲಕ್ಕೆ ಸಂಬಂಧಿಸಿದ ಎಲ್ಲಾ ದಾಖಲೆಗಳು ಇತ್ಯಾದಿ ಇರುವ ಕಡತ - ಹಾಳೆ ಸಂಖ್ಯೆಃ 1 ರಿಂದ 559
d) ಕಡತ ಸಂಖ್ಯೆ-6 - ಆಪಾದಿತರ ಕುಟುಂಬದ ಆಹಾರ ಪದಾರ್ಥಗಳ ಖರ್ಚು, ಸ್ವತ್ತು ನೋಂದಣಿಯ ಪೂರ್ವದಲ್ಲಿ ಪಾವತಿಸಿರುವ ಮುದ್ರಾಂಕ ಮತ್ತು ನೋಂದಣಿ ಶುಲ್ಕ, ಸ್ವತ್ತುಗಳ ಕಂದಾಯ ಪಾವತಿ, ವಿದ್ಯುತ್ ವೆಚ್ಚ, ಅಡುಗೆ ಅನಿಲ ವೆಚ್ಚ, ವಿದ್ಯಾಭ್ಯಾಸದ ವೆಚ್ಚ, ವಾಹನಗಳ ಖರೀದಿ ಸಾಲದ ಮರು ಪಾವತಿ, ವಾಹನಗಳ ತೆರಿಗೆ, ನಿರ್ವಹಣಾ ವೆಚ್ಚಗಳು, ವಿಮಾ ಪಾಲಿಸಿಗಳ ವೆಚ್ಚ, ಎಲ್ ಐ ಸಿ ಪಾಲಿಸಿಗಳ ಪ್ರೀಮಿಯಂ ಪಾವತಿ, ಮಕ್ಕಳ ಮದುವೆ ವೆಚ್ಚ ಹಾಗೂ ಇತ್ಯಾದಿ ಎಲ್ಲಾ ವೆಚ್ಚಗಳಿಗೆ ಸಂಬಂಧಿಸಿದ ದಾಖಲೆಗಳು ಇರುವ ಕಡತ - ಹಾಳೆ ನಂ. 1 ರಿಂದ 130
e) ಕಡತ ಸಂಖ್ಯೆ-7 - ಆಪಾದಿತರ ವೇತನದ ಆದಾಯ, ಕೃಷಿ ಆದಾಯ, ರೆವಿನ್ಯೂ ದಾಖಲೆಗಳು, ಬ್ಯಾಂಕ್ ಸಾಲಗಳು, ಬ್ಯಾಂಕ್ ಖಾತೆಗಳ ಬಡ್ಡಿ ಇತ್ಯಾದಿ ದಾಖಲೆಗಳು ಇರುವ ಕಡತ - ಹಾಳೆ ಸಂಖ್ಯೆಃ 1 ರಿಂದ 217
f) ಕಡತ ಸಂಖ್ಯೆ-8 - ತನಿಖಾಧಿಕಾರಿಯವರು ಅಂತಿಮ ವರದಿಯಲ್ಲಿ ಚರ್ಚಿಸಿರುವ ದಾಳಿ ಕಾಲದಲ್ಲಿ ಲಭ್ಯವಾದ ದಾಖಲೆಗಳ ಜೆರಾಕ್ಸ್ ಪ್ರತಿಗಳು ಇರುವ ಕಡತ -ಹಾಳೆ ನಂ. 1 ರಿಂದ 217
g) ಕಡತ ಸಂಖ್ಯೆ-9 - ಆಪಾದಿತರ ತಂದೆ ಅಂಚೆ ಇಲಾಖೆಯಲ್ಲಿ ಕೆಲಸ ನಿರ್ವಹಿಸಿದ ಬಗ್ಗೆ, ಆಪಾದಿತರು ಸರ್ಕಾರಿ ಸೇವೆಗೆ ಸೇರುವ ಪೂರ್ವದಲ್ಲಿ ಶಿಕ್ಷಕರಾಗಿ ಕೆಲಸ ಮಾಡಿದ ಬಗ್ಗೆ, ಆದಾಯ ತೆರಿಗೆ ತಃಖ್ತೆಗಳು, ಆಪಾದಿತರ ನಿವ್ವಳ ವೇತನದ ಮಾಹಿತಿಗಳು, ಕೋಟಕ್ ಮಹೇಂದ್ರ ಲಿ., ಪತ್ರ ಹಾಗೂ ಸ್ವತ್ತುಗಳನ್ನು ಖರೀದಿ ಮತ್ತು ವಿಲೇವಾರಿ ಮಾಡಿದ ಕೆಲವು ಸಾಕ್ಷಿದಾರರುಗಳ ಹೇಳಿಕೆಗಳ ಕಡತ -ಹಾಳೆ ನಂ. 1 ರಿಂದ 43

ತನಿಖಾಧಿಕಾರಿ ಶ್ರೀ ಎಂ ಎನ್ ಕರಿಬಸವನಗೌಡ, ಪೊಲೀಸ್ ನಿರೀಕ್ಷಕರು (ಹೆಚ್ಚುವರಿ ಪ್ರಭಾರ), ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ದಾವಣಗೆರೆ ಇವರು ಶ್ರೀ ಬಿ ಹೆಚ್ ಸಿದ್ದಪ್ಪ, ಉಪ ವಿಭಾಗಾಧಿಕಾರಿಗಳು, ಕಂದಾಯ ಇಲಾಖೆ, ಹಾವೇರಿ ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ದಾವಣಗೆರೆ ವಿಭಾಗ, ದಾವಣಗೆರೆ ಕರ್ನಾಟಕ ಲೋಕಾಯುಕ್ತ ಠಾಣೆ ಗುನ್ನೆ ನಂ. 04/2005 ರಲ್ಲಿ ಲಂಚ ನಿರೋಧಕ ಕಾಯ್ದೆ, 1988 ರ 13(1)(ಇ) ಜೊತೆಯಲ್ಲಿ ಓದಲಾದ ಕಲಂ 13(2) ರಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಮೇಲ್ಕಂಡಂತೆ ಪ್ರಕರಣವನ್ನು ದಾಖಲಿಸಿದ ನಂತರ ಈ ಕೆಳಕಾಣಿಸಿದ ತನಿಖಾಧಿಕಾರಿಗಳು ಪ್ರಕರಣದ ತನಿಖೆಯನ್ನು ಮುಂದುವರಿಸಿರುತ್ತಾರೆ.

1. ಶ್ರೀ ಎಂ.ಎನ್. ಕರಿಬಸವನಗೌಡ, ಪೋಲೀಸ್ ನಿರೀಕ್ಷಕರು (ಹೆಚ್ಚುವರಿ ಪ್ರಭಾರ), ಕರ್ನಾಟಕ ಲೋಕಾಯುಕ್ತ, ದಾವಣಗೆರೆ.
2. ಶ್ರೀ ಜಿ ಗುರುದತ್, ಪೋಲೀಸ್ ನಿರೀಕ್ಷಕರು (ಹೆಚ್ಚುವರಿ ಪ್ರಭಾರ), ಕರ್ನಾಟಕ ಲೋಕಾಯುಕ್ತ, ದಾವಣಗೆರೆ
3. ಶ್ರೀ ಹೆಚ್ ಎಸ್ ಗಂಗಾಧರಪ್ಪ, ಪೋಲೀಸ್ ನಿರೀಕ್ಷಕರು ಹಾಗೂ ಪೋಲೀಸ್ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ದಾವಣಗೆರೆ
4. ಶ್ರೀ ಕೆ ಎಂ ಬಸವರಾಜಪ್ಪ, ಪೋಲೀಸ್ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ದಾವಣಗೆರೆ

ಸದರಿ ಪ್ರಕರಣದ ತನಿಖೆಗೆ ಸಂಬಂಧಿಸಿದಂತೆ ಆಪಾದಿತರ ದಾವಣಗೆರೆ ನಿವಾಸ, ಆಪಾದಿತರು ಕರ್ತವ್ಯ ನಿರ್ವಹಿಸುತ್ತಿದ್ದ ಹಾವೇರಿಯ ಉಪ ವಿಭಾಗಾಧಿಕಾರಿಗಳ ಕಛೇರಿ ಮತ್ತು ಅಧಿಕೃತ ವಸತಿ ಗೃಹ ಮತ್ತು ಬ್ಯಾಂಕ್ ಲಾಕರನ್ನು ತನಿಖಾಧಿಕಾರಿಗಳು ಪಂಚರ ಸಮಕ್ಷಮ ದಿನಾಂಕಃ 15-11-05 ಮತ್ತು 26-11-05 ರಂದು ಶೋಧನೆ ನಡೆಸಿರುತ್ತಾರೆ. ಆ ಸಂದರ್ಭದಲ್ಲಿ ತಯಾರಿಸಲಾದ ಶೋಧನಾ ಪಂಚನಾಮೆಗಳ ಪ್ರಕಾರ ಆಪಾದಿತರ ಚರ ಮತ್ತು ಸ್ಥಿರಾಸ್ತಿ ಅಂದರೆ ಗೃಹೋಪಯೋಗಿ ಉಪಕರಣಗಳು, ಚಿನ್ನ, ಬೆಳ್ಳಿ, ಬ್ಯಾಂಕ್ ಖಾತೆಗಳು, ವಾಹನಗಳು ಮತ್ತು ಜಮೀನು ಇವುಗಳಿಗೆ ಸಂಬಂಧಿಸಿದ ದಾಖಲಾತಿಗಳು ಪತ್ತೆಯಾಗಿರುತ್ತವೆ.

ಆಪಾದಿತರು ಸರ್ಕಾರಿ ಸೇವೆಗೆ ಸೇರಿದ ವರ್ಷದಲ್ಲಿ ಆಸ್ತಿ ಮತ್ತು ಋಣ ತಃಖ್ತೆಗಳನ್ನು ಸಕ್ಷಮ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ಸದರಿಯವರು ತಮ್ಮ ಸೇವಾ ಅವಧಿಯಲ್ಲಿ 1993-94 ರಿಂದ 2004-05 ರವರೆಗೆ ಮಾತ್ರ ಆಸ್ತಿ ಮತ್ತು ಋಣ ತಃಖ್ತೆಗಳನ್ನು ಸಲ್ಲಿಸಿದ್ದು, ಸದರಿ ತಃಖ್ತೆಗಳಲ್ಲಿ ತಾನು ಹೊಂದಿರುವ ಸ್ಥಿರಾಸ್ತಿಗಳು ಹಾಗೂ ಚರಾಸ್ತಿಗಳ ವಿವರಗಳನ್ನು ತಿಳಿಸಿರುವುದಿಲ್ಲ. ಆಪಾದಿತರು ನಿಯಮಕ್ಕನುಗುಣವಾಗಿ ಸ್ವತ್ತುಗಳ ವಿವರಗಳನ್ನು ಆಸ್ತಿ ಋಣ ತಃಖ್ತೆಗಳಲ್ಲಿ ತಿಳಿಸಬೇಕಾಗಿತ್ತು ಮತ್ತು ಆದಾಯ ತೆರಿಗೆ ಇಲಾಖೆಗೆ ಆದಾಯದ ಮೂಲಗಳನ್ನು ಘೋಷಣೆ ಮಾಡಿಕೊಂಡಿರಬೇಕಾಗಿತ್ತು.

1988 ರ ಲಂಚ ನಿರೋಧಕ ಕಾಯ್ದೆ 13(1)(ಇ) ರ ಅಡಿಯಲ್ಲಿ ವ್ಯಾಖ್ಯಾನಿಸಲಾದ ಬಲ್ಲ ಮೂಲದ ವ್ಯಾಖ್ಯಾನೆಗೆ ಸರ್ಕಾರಿ ಅಧಿಕಾರಿ ಕಾನೂನು ಬದ್ದವಾಗಿ ತನಗೆ ಬಂದ ಆದಾಯವನ್ನು ಪ್ರಚಲಿತವಿರುವ ಕಾಯ್ದೆ, ನಿಯಮ ಅಥವಾ ಸ್ಥಾಯಿ ಆದೇಶಗಳಿಗೆ ಅನುಗುಣವಾಗಿ ಘೋಷಣೆಯನ್ನು ಮಾಡಿಕೊಂಡಿರಬೇಕೆಂದು ಅಂತ ಆದಾಯ ಮಾತ್ರ ಬಲ್ಲ ಮೂಲದ ಆದಾಯವೆಂದು ಪರಿಗಣಿತವಾಗುತ್ತದೆ. ಆದುದರಿಂದ ಆಪಾದಿತರ ಕೃಷಿ ಹಾಗೂ ಬ್ಯಾಂಕ್ ಸಾಲದ ಆದಾಯದ ಮೂಲಗಳನ್ನು ಅವರ ಆದಾಯದ ತಃಖ್ತೆಗೆ ಪರಿಗಣಿಸಿರುವುದಿಲ್ಲ.

ಸದರಿ ಪ್ರಕರಣದಲ್ಲಿ ತನಿಖೆಯು ಪೂರ್ಣಗೊಂಡ ನಂತರ ಆಪಾದಿತ ಅಧಿಕಾರಿ ಶ್ರೀ ಬಿ ಹೆಚ್ ಸಿದ್ದಪ್ಪ, ಉಪ ವಿಭಾಗಾಧಿಕಾರಿಗಳು, ಕಂದಾಯ ಇಲಾಖೆ, ಹಾವೇರಿ ಇವರು ದಿನಾಂಕಃ05-10-84 ರಿಂದ ದಿನಾಂಕಃ 15-11-05 ರವರೆಗಿನ ಪರಿಶೀಲನಾ ಅವಧಿಯಲ್ಲಿ (Check Period) ಒಟ್ಟು ರೂ. 52,31,450-00 ಗಳ ಆಸ್ತಿಯನ್ನು ಹೊಂದಿರುತ್ತಾರೆಂದು ಮತ್ತು ಈ ಅವಧಿಯಲ್ಲಿ ಆಪಾದಿತರು ತನ್ನ ಮತ್ತು ತನ್ನ ಕುಟುಂಬದ ಸದಸ್ಯರುಗಳಿಗಾಗಿ ಮಾಡಿರುವ ಒಟ್ಟು ಖರ್ಚು ರೂ. 59,41,235-00 ಗಳಾಗಿದ್ದು, ಆಪಾದಿತರು ಈ ಅವಧಿಯಲ್ಲಿ ಎಲ್ಲಾ ಕ ಬಲ್ಲ ಮೂಲ ಕ ಗಳಿಂದ ಗಳಿಸಿರುವ ಆದಾಯವು ರೂ. 15,97,715-00 ಗಳಾಗಿರುತ್ತದೆಂದು ಕಂಡು ಬಂದಿರುತ್ತದೆ. ಆಪಾದಿತರ ಆಸ್ತಿ ಮತ್ತು ಖರ್ಚಿನ ಒಟ್ಟು ಮೊತ್ತ ರೂ. 1,11,72,685-00 ಗಳಾಗಿದ್ದು, ಹೆಚ್ಚಿನ ಪ್ರಮಾಣದ ಆಸ್ತಿಯ ಮೊತ್ತವು ರೂ. 95,74,970-00 ಗಳಾಗಿರುತ್ತವೆ. ಅಂದರೆ ಆಪಾದಿತ ಸರ್ಕಾರಿ ಅಧಿಕಾರಿ ಶೇಕಡ 599.2೪ ರಷ್ಟು ತಮ್ಮ ಬಲ್ಲ ಮೂಲಗಳಿಗಿಂತಲೂ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವುದು ಕಂಡು ಬಂದಿರುತ್ತದೆ. ಇದಕ್ಕೆ ಆಪಾದಿತರ ಬಳಿ ಯಾವುದೇ ಸಮರ್ಥನೀಯ ವಿವರಣೆ ಅಥವಾ ಸಮರ್ಥನೀಯ ಲೆಕ್ಕ ಲಭ್ಯವಿರುವುದಿಲ್ಲ.

ಆದ್ದರಿಂದ ಶ್ರೀ ಬಿ ಹೆಚ್ ಸಿದ್ದಪ್ಪ, ಉಪ ವಿಭಾಗಾಧಿಕಾರಿಗಳು, ಕಂದಾಯ ಇಲಾಖೆ, ಹಾವೇರಿ ಇವರು ಲಂಚ ನಿರೋಧಕ ಕಾಯ್ದೆ 1988 ರ ಕಲಂ 13(1)(ಇ) ರ ಜೊತೆ ಕಲಂ 13(2) ರ ಅಡಿಯಲ್ಲಿ ಅಪರಾಧ ಎಸಗಿರುವುದು ಸ್ಪಷ್ಟವಾಗಿ ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ.

ಆಪಾದಿತ ಸರ್ಕಾರಿ ಅಧಿಕಾರಿ ತಮ್ಮ "ಬಲ್ಲ ಮೂಲ" ಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಆಸ್ತಿಯನ್ನು ಗಳಿಸಿ ಅಪರಾಧಿಕ ದುರ್ನಡತೆ ಎಸಗಿರುವುದರಿಂದ, ಸದರಿಯವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸುವುದು ಅವಶ್ಯಕವೆಂದು ಅಭಿಪ್ರಾಯ ಪಡಲಾಗಿದೆ.

ಆಪಾದಿತರು ಲಂಚ ನಿರೋಧಕ ಕಾಯ್ದೆ 1988 ರ ಕಲಂ 13(1)(ಇ) ರ ಜೊತೆ ಕಲಂ 13(2) ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧ ಎಸಗಿರುವುದು ಸ್ಪಷ್ಟವಾಗಿ ಹಾಗೂ ಸಂಪೂರ್ಣವಾಗಿ ಸರ್ಕಾರಕ್ಕೆ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ

ನಿರೋಧಕ ಕಾಯ್ದೆ 1988 ರ ಕಲಂ 13(1)(ಇ) ರ ಜೊತೆ ಕಲಂ 13(2) ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯವೆಂದು ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತನನ್ನು ಕೆಲಸದಿಂದ ತೆಗೆದು ಹಾಕುವ ಅಧಿಕಾರ ಹೊಂದಿರುತ್ತದೆ. ಆದ್ದರಿಂದ ಲಂಚ ನಿರೋಧಕ ಕಾಯ್ದೆ 1988 ರ ಕಲಂ 19(1)(ಬಿ) ಅಡಿಯಲ್ಲಿ ಆಪಾದಿತ ಅಧಿಕಾರಿ ಶ್ರೀ ಬಿ ಹೆಚ್ ಸಿದ್ದಪ್ಪ, ಉಪ ವಿಭಾಗಾಧಿಕಾರಿಗಳು, ಕಂದಾಯ ಇಲಾಖೆ, ಹಾವೇರಿ ಇವರನ್ನು ಲಂಚ ನಿರೋಧಕ ಕಾಯ್ದೆ 1988 ರ ಕಲಂ 13(1)(ಇ) ರ ಜೊತೆ ಕಲಂ 13(2) ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಹೊಂದಿದೆ, ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 254 ಕೆಇವಿ 07, ಬೆಂಗಳೂರು, ದಿನಾಂಕ: 17ನೇ ಜುಲೈ 08**

ಆರೋಪಿಯಾದ ಶ್ರೀ ಬಿ ಹೆಚ್ ಸಿದ್ದಪ್ಪ, ಉಪ ವಿಭಾಗಾಧಿಕಾರಿಗಳು, ಕಂದಾಯ ಇಲಾಖೆ, ಹಾವೇರಿ ಇವರನ್ನು ಹುದ್ದೆಯಿಂದ ತೆಗೆದು ಹಾಕುವ / ವಜಾ ಮಾಡುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಬಿ ಹೆಚ್ ಸಿದ್ದಪ್ಪ, ಉಪ ವಿಭಾಗಾಧಿಕಾರಿಗಳು, ಕಂದಾಯ ಇಲಾಖೆ, ಹಾವೇರಿ ಇವರನ್ನು ಲಂಚ ನಿರೋಧಕ ಕಾಯ್ದೆ 1988 ರ ಕಲಂ 13(1)(ಇ) ರ ಜೊತೆ ಕಲಂ 13(2) ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಜನೆಗೊಳಿಸಲು ಈ ಮೂಲಕ ಮಂಜೂರಾತಿಯನ್ನು ನೀಡಿದೆ.

ಆದ್ದರಿಂದ, ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ, 1977 ರ ಈ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿ ಅಡಿಯಲ್ಲಿ ದಿನಾಂಕ: 17-07-08 ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1103

**ಎಚ್ ಆರ್ ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಸೇವೆಗಳು-2)

**ವಿಷಯ:** ಶ್ರೀ ವಿ ವಿ ಪುಣೇದ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಹಿಂದಿನ ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಮುಂಡರಗಿ, ಗದಗ್ ಜಿಲ್ಲೆ ಇವರ ವಿರುದ್ದ ಇಲಾಖಾ ವಿಚಾರಣೆ - ಅಂತಿಮ ಆದೇಶ.

**ಓದಲಾಗಿದೆ:** 1) ದಿನಾಂಕ: 30-08-07 ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 380 ಎಸ್ಇಎನ್ 06
2) ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಹಾಗೂ ವಿಚಾರಣಾಧಿಕಾರಿಗಳು ಇವರ ದಿನಾಂಕ: 17-02-08 ರ ವಿಚಾರಣಾ ವರದಿ ಸಂಖ್ಯೆ: ಪ್ರಾಆಬೆ/ಸಿಬ್ಬಂದಿ-1/ ವಿವ/03/2007-08

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ, ಶ್ರೀ ವಿ ವಿ ಪುಣೇದ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಇವರು ಈ ಹಿಂದೆ ಗದಗ ಜಿಲ್ಲೆಯ ಮುಂಡರಗಿ ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಾಹಕ ಅಧಿಕಾರಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಮುಂಡರಗಿ ತಾಲ್ಲೂಕಿನ ಸ್ವಯಂಸೇವಾ ಸಂಸ್ಥೆಗಳಿಗೆ ತರಬೇತಿಗಾಗಿ ಯಾವುದೇ ಹಣ ಮಂಜೂರು ಮಾಡದೇ ಇದ್ದರೂ 2001-02 ಹಾಗೂ 2002-03 ನೇ ಸಾಲಿನಲ್ಲಿ ಎಸ್.ಜಿ.ಎಸ್.ವೈ. ಯೋಜನೆಯಡಿ ಸಹಾಯಧನಕ್ಕಾಗಿ ಬಿಡುಗಡೆ ಮಾಡಿದ ಅನುದಾನದ ಪೈಕಿ ರೂ. 94750-00 ಗಳನ್ನು ಮೇಲಧಿಕಾರಿಗಳ ಅನುಮೋದನೆ ಪಡೆಯದೆ ತರಬೇತಿಗಾಗಿ ವೆಚ್ಚ ಮಾಡಿ ಸದರಿ ಯೋಜನೆಯ ಅನುಷ್ಠಾನದಲ್ಲಿ ವ್ಯತ್ಯಯ ಉಂಟು ಮಾಡಿ, ಕರ್ತವ್ಯ ನಿರ್ವಹಣೆಯಲ್ಲಿ ಲೋಪವೆಸಗುವ ಮೂಲಕ ಎಸಗಿದ ದುರ್ನಡತೆ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆಯ ಮೂಲಕ ತಿಳಿಯುವ ಸಲುವಾಗಿ, ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ ನಿಯಮ 11 (2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಆರೋಪದ ಬಗ್ಗೆ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಂತೆ ವಿಚಾರಣಾಧಿಕಾರಿಯವರು ಸಲ್ಲಿಸಿದ ವಿಚಾರಣಾ ವರದಿಯಲ್ಲಿ, ಶ್ರೀ ವಿ.ವಿ. ಪುಣೇದ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಇವರ ವಿರುದ್ದದ 1ನೇ ಮತ್ತು 3ನೇ ಆರೋಪಗಳು ಭಾಗಶ: ಸಾಬೀತಾಗಿದೆ ಎಂದು ವರದಿ ನೀಡಿರುತ್ತಾರೆ. ವಿಚಾರಣಾ ವರದಿಯನ್ನು ಸರ್ಕಾರವು, ಕೂಲಂಕಷವಾಗಿ ಪರಿಶೀಲಿಸಿದ್ದು, ಮೇಲಧಿಕಾರಿಗಳ ಅನುಮೋದನೆ ಪಡೆಯದೆ ಅನುದಾನವನ್ನು ಮಾರ್ಗಪಲ್ಲಟ ಮಾಡಿರುವುದು ಹಾಗೂ ಬ್ಯಾಂಕಿನಿಂದ ಹಣಪಡೆಯುವ ಕಾರ್ಯವಿಧಾನದಲ್ಲಿ ಲೋಪವಾಗಿದ್ದರೂ ಸಹ ಸರ್ಕಾರದ ಹಣ ದುರ್ಬಳಕೆಯಾಗಿಲ್ಲದ ಹಿನ್ನೆಲೆಯಲ್ಲಿ ಹಾಗೂ ಆಗಿರುವ ಲೋಪಗಳು ಅಷ್ಟೊಂದು ಗಂಭೀರ ಸ್ವರೂಪದ್ದಾಗಿಲ್ಲದ ಕಾರಣ, ವರದಿಯನ್ನು ಅಂಗೀಕರಿಸಿ ಸರ್ಕಾರವು, ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 253 ಕೆಇವಿ 07 ಬೆಂಗಳೂರು, ದಿನಾಂಕಃ 24ನೇ ಜುಲೈ, 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರವು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ ನಿಯಮ 8 (ii) ರ ಪ್ರಕಾರ, ಶ್ರೀ ವಿ.ವಿ. ಪುಣೇದ್, ಕೆಎಎಸ್(ಕಿರಿಯ ಶ್ರೇಣಿ) ಅಧಿಕಾರಿ (ಪ್ರಸ್ತುತ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಕೊಪ್ಪಳ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ) ಇವರಿಗೆ ವಾಗ್ದಂಡನೆ ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1127

**ಎಚ್ ಆರ್ ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು-2)

**ವಿಷಯಃ** ಶ್ರೀ ಓಂಕಾರಮೂರ್ತಿ, ಕೆಎಎಸ್ ಕಿರಿಯ ಶ್ರೇಣಿ ಅಧಿಕಾರಿ, ಹಿಂದಿನ ತಹಶೀಲ್ದಾರ್, ತರೀಕೆರೆ ಹಾಗೂ ಶ್ರೀ ಈ ಆರ್ ಹಾಲಪ್ಪ, ಗ್ರಾಮ ಪಂಚಾಯತಿ ಕಾರ್ಯದರ್ಶಿ, ಸುಣದಹಳ್ಳಿ, ಚಿಕ್ಕಮಗಳೂರು (ಹಿಂದಿನ ವಿಷಯ ನಿರ್ವಾಹಕರು, ತಾಲ್ಲೂಕು ಕಛೇರಿ, ತರೀಕೆರೆ) ಇವರ ವಿರುದ್ಧ ಜಂಟಿ ಇಲಾಖಾ ವಿಚಾರಣೆ - ಅಂತಿಮ ಆದೇಶ.

**ಓದಲಾಗಿದೆಃ**
1. ದಿನಾಂಕಃ 27-08-07 ರ ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ 086 ಎಸ್ಇಎನ್ 04
2. ದಿನಾಂಕಃ 21-01-08 ರ ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ 197 ಕೆಇವಿ 08
3. ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಹಾಗೂ ವಿಚಾರಣಾಧಿಕಾರಿಗಳು ಇವರ ದಿನಾಂಕಃ 23-06-08 ರ ವಿಚಾರಣಾ ವರದಿ ಸಂಖ್ಯೆಃ ಪ್ರಾಆಕ/ಸಿಸಿಎ/ಸಿಆರ್/49/2007-08

**ಪ್ರಸ್ತಾವನೆಃ**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ, ಶ್ರೀ ಓಂಕಾರಮೂರ್ತಿ, ಕೆ ಎ ಎಸ್ ಕಿರಿಯ ಶ್ರೇಣಿ ಅಧಿಕಾರಿ, ಇವರು ತರೀಕೆರೆ ತಾಲ್ಲೂಕು ತಹಶೀಲ್ದಾರರಾಗಿ ಮತ್ತು ಶ್ರೀ ಈ ಆರ್ ಹಾಲಪ್ಪ, ಇವರು ತರೀಕೆರೆ ತಾಲ್ಲೂಕು ಕಛೇರಿಯಲ್ಲಿ ವಿಷಯ ನಿರ್ವಾಹಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಶ್ರೀ ಎಸ್ ಎನ್ ಮಹೇಂದ್ರ ಎಂಬುವವರು ಹಿಂದುಳಿದ ವರ್ಗದ ಕುರುಬ ಜಾತಿಗೆ ಸೇರಿದ್ದರೂ ಸಹ ಸದರಿಯವರು ಪರಿಶಿಷ್ಟ ಪಂಗಡಕ್ಕೆ ಸೇರಿದವರೆಂದು ಸುಳ್ಳು ಜಾತಿ ಪ್ರಮಾಣ ಪತ್ರ ನೀಡಿದ ಆರೋಪದ ಸಂಬಂಧ ಸದರಿ ಅಧಿಕಾರಿ / ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಮುಂದುವರಿಸಿ, ವಿಚಾರಣೆ ನಡೆಸಿ ವರದಿ ಸಲ್ಲಿಸಲು, ಪ್ರಾದೇಶಿಕ ಆಯುಕ್ತರು, ಪ್ರಾದೇಶಿಕ ಆಯುಕ್ತರ ಕಛೇರಿ, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ತಹಶೀಲ್ದಾರ್, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ರವರನ್ನು ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ, ಮಂಡನಾಧಿಕಾರಿಯಾಗಿ ನೇಮಿಸಲ್ಪಟ್ಟ ತಹಶೀಲ್ದಾರ್ ತರೀಕೆರೆ ತಾಲ್ಲೂಕು ರವರು ಆರೋಪ ಪಟ್ಟಿಯ ಅನುಬಂಧ-3 ರಲ್ಲಿನ ಸಾಕ್ಷಿ ಪಟ್ಟಿಯಲ್ಲಿ ಸಾಕ್ಷಿದಾರರಾಗಿಯೂ ಸಹ ಇರುವುದು ಸರ್ಕಾರದ ಗಮನಕ್ಕೆ ಬಂದ ಕಾರಣ ಇವರ ಬದಲಿಗೆ ತಹಶೀಲ್ದಾರ್ (ಆಡಳಿತ), ಪ್ರಾದೇಶಿಕ ಆಯುಕ್ತರ ಕಛೇರಿ, ಬೆಂಗಳೂರು ವಿಭಾಗ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಂತೆ ಸಲ್ಲಿಸಿದ ವಿಚಾರಣಾ ವರದಿಯಲ್ಲಿ, ಶ್ರೀ ಓಂಕಾರಮೂರ್ತಿ ಮತ್ತು ಶ್ರೀ ಈ ಆರ್ ಹಾಲಪ್ಪ ಇವರುಗಳ ವಿರುದ್ದದ ಆರೋಪವು ರುಜುವಾತಾಗಿದೆ ಎಂದು ವಿಚಾರಣಾಧಿಕಾರಿಯವರು ವರದಿ ನೀಡಿರುತ್ತಾರೆ. ಆದಾಗ್ಯೂ ಶ್ರೀ ಓಂಕಾರಮೂರ್ತಿ ಇವರು ಘಟನೆ ನಡೆದ ಸಂದರ್ಭದಲ್ಲಿ ಸೇವೆಯ ಪ್ರಥಮದಲ್ಲಿ ಇದ್ದುದರಿಂದ ಅನುಭವದ ಕೊರತೆಯಿಂದ ಈ ಪ್ರಮಾದವಾಗಿದೆ ಎಂಬುದನ್ನು ಭಾಗಶಃ ಒಪ್ಪಬಹುದೆಂದು ತಿಳಿಸಿರುತ್ತಾರೆ. ಆರೋಪಿತರು ಸಲ್ಲಿಸಿರುವ ರಕ್ಷಣಾತ್ಮಕ ಹೇಳಿಕೆಯೊಂದಿಗೆ ವಿಚಾರಣಾ ವರದಿಯನ್ನು, ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ್ದು, ತಪ್ಪು ಜಾತಿ ಪ್ರಮಾಣ ಪತ್ರಕ್ಕೆ ಸಹಿ ಹಾಕಿರುವುದು ಉದ್ದೇಶಪೂರ್ವಕವಲ್ಲವೆಂದು, ಅಧೀನ ಸಿಬ್ಬಂದಿಯ ನಿರ್ಲಕ್ಷ್ಯ / ಕಣ್ತಪ್ಪಿನಿಂದಾಗಿ ಹಾಗೂ ಅನುಭವ ಕೊರತೆಯಿಂದಾಗಿ ಮತ್ತು ಕೆಲಸದ ಒತ್ತಡದಿಂದಾಗಿ ಈ ಪ್ರಮಾದವಾಗಿದೆ ಎಂದು ತಿಳಿಸಿರುವುದನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 197 ಕೆಇವಿ 07,ಬೆಂಗಳೂರು, ದಿನಾಂಕಃ 23ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರವು, ಶ್ರೀ ಓಂಕಾರಮೂರ್ತಿ, ಕೆ ಎ ಎಸ್ (ಕಿರಿಯ ಶ್ರೇಣಿ), ಮನೆ ಬಾಡಿಗೆ ನಿಯಂತ್ರಣಾಧಿಕಾರಿ, ಬೆಂಗಳೂರು ಉತ್ತರ, ಬೆಂಗಳೂರು ಹಾಗೂ ಶ್ರೀ ಈ ಆರ್ ಹಾಲಪ್ಪ, ಗ್ರಾಮ ಪಂಚಾಯತಿ

ಕಾರ್ಯದರ್ಶಿ, ಸುಣಹಳ್ಳಿ, ಚಿಕ್ಕಮಗಳೂರು ಜಿಲ್ಲೆ ಇವರುಗಳು ಇನ್ನು ಮುಂದೆ ಸರ್ಕಾರಿ ಕೆಲಸದ ಕಾರ್ಯನಿರ್ವಹಣೆಯಲ್ಲಿ ಹೆಚ್ಚಿನ ಜಾಗರೂಕತೆಯಿಂದ ಕರ್ತವ್ಯ ನಿರ್ವಹಿಸುವಂತೆ ಈ ಮೂಲಕ ಎಚ್ಚರಿಕೆ ನೀಡುತ್ತಾ, ಇವರ ವಿರುದ್ದ ಮಾಡಲಾಗಿರುವ ಆರೋಪಗಗಳಿಂದ ಆರೋಪಮುಕ್ತಗೊಳಿಸಿ ಆದೇಶಿಸಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಇವರುಗಳು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1296

**ಎಚ್ ಆರ್ ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಸೇವೆಗಳು-2)

**ವಿಷಯಃ** ಶ್ರೀ. ಎಂ.ಎನ್.ಗದಗ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾದೀಶರು ಹಾಗೂ ವಿಚಾರಣಾಧಿಕಾರಿಗಳು -ಇವರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆಃ**
1. ಸರ್ಕಾರಿ ಆದೇಶ ಸಂಃ ಸಿಅಸುಇ 148 ಎಸ್ಇಎನ್ 04 ದಿಃ 27.07.2006.
2. ವಿಚಾರಣಾಧಿಕಾರಿ ರವರ ವರದಿ ದಿಃ01-07-08.
3. ವಿಚಾರಣಾಧಿಕಾರಿ ರವರ ಮನವಿ ದಿಃ10-07-08.

**ಪ್ರಸ್ತಾವನೆಃ**

ಮೇಲೆ ಕ್ರಮ ಸಂ(1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ. ಬಿ.ಹೆಚ್. ಪೂಜಾರ್ ಕೆ.ಎ.ಎಸ್.(ನಿವೃತ್ತ) ಅಧಿಕಾರಿ ರವರು ಹಾವೇರಿ ಉಪ ವಿಭಾಗಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಬ್ಯಾಡಗಿ ತಾಲ್ಲೂಕು ಶಿಡೇನೂರ ಗ್ರಾಮದ ಸ.ನಂಃ 408ಃ 1+2ಬಿ ಕ್ಷೇತ್ರ 5ಎ-3B ಗುಂಟೆ ಜಮೀನಿನಲ್ಲಿ ಹಿಸ್ಸೆ ಮಾಲಿಕತ್ವ ಹೊಂದಿರುವ ಹಕ್ಕುದಾರರಿಗೆ ಕೊಳವೆ ಬಾವಿ ವಿದ್ಯುತ್ ಸಂಪರ್ಕಕ್ಕೆ ಪರವಾನಿಗೆ ನೀಡಿರುವ ಕುರಿತು ಹಾಗೂ ಹಾವೇರಿ ಪುರಸಭೆಯಲ್ಲಿ ಶೇ.18ರ ಹಣದಲ್ಲಿ ಪರಿಶಿಷ್ಟ ಜಾತಿಃ ಪರಿಶಿಷ್ಟ ಪಂಗಡ ಶಾಲಾ ಮಕ್ಕಳಿಗೆ ಸ್ಕೂಲ್ ಬ್ಯಾಗ್ ಖರೀದಿಯಲ್ಲಿ ಅವ್ಯವಹಾರ ನಡೆದಿದೆ ಎನ್ನುವ ಆರೋಪಕ್ಕೆ ಸಂಬಂಧಿಸಿದ ಆರೋಪಗಳ ಕುರಿತು ವಿಚಾರಣೆ ನಡೆಸಲು ಮೇಲೆ ಓದಲಾದ ಉಲ್ಲೇಖ (1) ಸರ್ಕಾರಿ ಆದೇಶದಲ್ಲಿ ಶ್ರೀ. ಎಂ.ಎನ್. ಗದಗ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಈ ಪ್ರಕರಣದಲ್ಲಿ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂಃ(2) ರಲ್ಲಿ ಓದಲಾದ ದಿಃ 01-07-08 ರಲ್ಲಿ ವಿಚಾರಣೆ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂ(3)ರಲ್ಲಿ ಓದಲಾದ ಮನವಿಯಲ್ಲಿ ವಿಚಾರಣಾಧಿಕಾರಿಯವರು ವಿಚಾರಣೆಯನ್ನು ನಡೆಸಿರುವ ಸಂಬಂಧ ಗೌರವಧನ ಹಾಗೂ ಪ್ರಯಾಣ ಭತ್ಯೆ ಮಂಜೂರು ಮಾಡುವಂತೆ ಕೋರಿರುತ್ತಾರೆ. ಅದರಂತೆ ಈ ಆದೇಶಃ

**ಸರ್ಕಾರಿ ಆದೇಶ ಸಂಃ ಸಿಅಸುಇ 148 ಎಸ್ಇಎನ್ 04 (ಸಿಅಸುಇ 166 ಕೆಇವಿ 07)**

**ಬೆಂಗಳೂರು, ದಿನಾಂಕಃ 22ನೇ ಆಗಸ್ಟ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಶ್ರೀ. ಎಂ.ಎನ್. ಗದಗ್ ,ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಧಾರವಾಡ ಇವರಿಗೆ ಇಲಾಖಾ ವಿಚಾರಣೆ ನಡೆಸಿ,ವಿಚಾರಣಾ ವರದಿಯನ್ನು ಸಲ್ಲಿಸಿದ್ದಕ್ಕಾಗಿ ಸರ್ಕಾರಿ ಆದೇಶ ಸಂಃ ಸಿಅಸುಇ 16 ಸೇಇವಿ 05 ದಿಃ 23-08-05 ರನ್ವಯ ರೂಃ 6000.00 (ಆರು ಸಾವಿರ ರೂಪಾಯಿಗಳು ಮಾತ್ರ) ಗೌರವಧನವನ್ನು ಹಾಗೂ ಸರ್ಕಾರಿ ಆದೇಶ ಸಂಃ ಸಿಅಸುಇ 45 ಸೇಇವಿ 01 ದಿಃ 04-03-02 ರನ್ವಯ ರೂಃ 1000.00 (ಒಂದು ಸಾವಿರ ರೂಪಾಯಿಗಳು ಮಾತ್ರ) ಗಳ ಪ್ರಯಾಣ ಭತ್ಯೆಯನ್ನು ಪಾವತಿಸಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಅಯವ್ಯಯ ಲೆಕ್ಕ ಶೀರ್ಷಿಕೆ 2052-ಸಚಿವಾಲಯ-ಸಾಮಾನ್ಯ ಸೇವೆಗಳು-090-ಸಚಿವಾಲಯ-01,ಕರ್ನಾಟಕ ಸರ್ಕಾರ ಸಚಿವಾಲಯ-051-ಸಾಮಾನ್ಯ ವೆಚ್ಚಗಳು ರಡಿ ಭರಿಸಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಅರ್. 1248

**ಎಚ್ ಆರ್ ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಸೇವೆಗಳು-2)

ವಿಷಯಃ ಶ್ರೀ. ಸಿ.ಹೆಚ್. ಪ್ರಭುದೇವ್, ಕೆ.ಎ.ಎಸ್ (ಹಿ.ಶ್ರೇ) ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ-ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

ಓದಲಾಗಿದೆಃ 1. ನೋಟೀಸ್ ಸಂಃ ಸಿಅಸುಇ 323 ಕೇಇವಿ 07 ದಿಃ06-06-08.

2. ಶ್ರೀ. ಸಿ.ಹೆಚ್. ಪ್ರಭುದೇವ್ ಕೆ.ಎ.ಎಸ್ (ಹಿ.ಶ್ರೇ) ಅಧಿಕಾರಿ ರವರ ಲಿಖಿತ ಹೇಳಿಕೆ ದಿಃ 28-06-08.

ಪ್ರಸ್ತಾವನೆಃ

ಶ್ರೀ. ಸಿ.ಹೆಚ್. ಪ್ರಭುದೇವ್ ಕೆ.ಎ.ಎಸ್ (ಹಿ.ಶ್ರೇ) ಅಧಿಕಾರಿ ರವರು ಈ ಹಿಂದೆ ಆಯುಷ್ ಇಲಾಖೆಯಲ್ಲಿ ಮುಖ್ಯ ಆಡಳಿತಾಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ಅರ್ಜಿ ಸಂಃ4862ಃ 2007ಕ್ಕೆ ಸಂಬಂಧಿಸಿದಂತೆ ದಿಃ 30-03-07ರ ತೀರ್ಪಿನ ಪ್ರತಿ ನಿರ್ದೇಶನಾಲಯದಲ್ಲಿ ಸ್ವೀಕೃತಗೊಂಡಿದ್ದು, ಸದರಿ ಅದೇಶದ ಪ್ರತಿಯನ್ನಾಗಲೀ ಅಥವಾ ಸಂಬಂಧಿಸಿದ ಕಡತವನ್ನಾಗಲೀ ನಿರ್ದೇಶಕರು, ಆಯುಷ್ ಇಲಾಖೆ ರವರ ಗಮನಕ್ಕೆ ತರದೇ ಪ್ರಾಚಾರ್ಯರು, ಆಯುರ್ವೇದ ವೈದ್ಯ ಮಹಾವಿದ್ಯಾಲಯ,ವಿಜಾಪುರ ರವರಿಗೆ ಕ್ರಮ ಕೈಗೊಳ್ಳಲು ಪತ್ರ ಬರೆದಿದ್ದು ಅರ್ಜಿದಾರರ ಮನವಿಯನ್ನಾಗಲೀ ಅಥವಾ ಉಚ್ಚ ನ್ಯಾಯಾಲಯದ ನಿರ್ದೇಶನವನ್ನಾಗಲೀ ನಿರ್ದೇಶಕರ ಗಮನಕ್ಕೆ ತರದೇ ಇದ್ದುದರಿಂದ ರಿಟ್ ಅರ್ಜಿದಾರರು ನ್ಯಾಯಾಲಯದಲ್ಲಿ ನಿಂದನಾ ಅರ್ಜಿ ಸಂಃ 596ಃ 07 ಸಲ್ಲಿಸಲು ಕಾರಣರಾಗಿದ್ದು ಸರ್ಕಾರಿ ಕೆಲಸದಲ್ಲಿ ತೋರಿರುವ ಕರ್ತವ್ಯಲೋಪಗಳ ಕುರಿತು ವಿಚಾರಣೆ ನಡೆಸಲು ಮೇಲೆ ಕ್ರಮ ಸಂ(1) ರಲ್ಲಿ ಓದಲಾದ ನೋಟೀಸಿನೊಂದಿಗೆ ದೋಷಾರೋಪಣೆಗಳನ್ನು ಜಾರಿ ಮಾಡುವುದರ ಮೂಲಕ ಇವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ಮೇಲೆ ಓದಲಾದ ಕ್ರಮ ಸಂ(2) ರಲ್ಲಿ ಅಪಾದಿತ ಅಧಿಕಾರಿಗಳು ನೋಟೀಸ್‌ಗೆ ಉತ್ತರ ಸಲ್ಲಿಸಿ ಅವರ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ.

ಶ್ರೀ. ಸಿ.ಹೆಚ್. ಪ್ರಭುದೇವ್, ಕೆ.ಎ.ಎಸ್ (ಹಿ.ಶ್ರೇ) ಅಧಿಕಾರಿ ಇವರು ತಮ್ಮ ಉತ್ತರದಲ್ಲಿ ಆಯುಷ್ ನಿರ್ದೇಶನಾಲಯದ ನಿರ್ದೇಶಕರು ರಜೆ ಮೇಲೆ ತೆರಳಿದ ಕಾರಣ ತಾವು ದಿಃ 21-05-07 ರಿಂದ 07-06-07 ರವರೆಗೆ ಆಯುಷ್ ನಿರ್ದೇಶನಾಲಯದ ನಿರ್ದೇಶಕರಾಗಿ ಪ್ರಭಾರ ವಹಿಸಿಕೊಂಡಿದ್ದು ಆ ಸಂದರ್ಭದಲ್ಲಿ ಶ್ರೀ. ಈಶ್ವರಯ್ಯ ಜವಳಿಮಠ ಪ್ರ.ದ.ಸ. ಎಂಬುವರು ಉಚ್ಚ ನ್ಯಾಯಾಲಯದ ಆದೇಶ ರಿಟ್ ಅರ್ಜಿ ಸಂಃ4862/ 07 ರಲ್ಲಿ ನೀಡಿರುವ ತೀರ್ಪಿನ ಪ್ರತಿಯೊಂದಿಗೆ ಮನವಿಯನ್ನು ನೀಡಿದ್ದು, ಸದರಿ ತೀರ್ಪನ್ನು ಸ್ವೀಕರಿಸಿದ ಮೂರು ತಿಂಗಳೊಳಗೆ ಅರ್ಜಿದಾರರ ಮೇಲ್ಮನವಿಯನ್ನು ವಿಲೇವಾರಿ ಮಾಡಲು ನ್ಯಾಯಾಲಯದ ನಿರ್ದೇಶನ ಇದ್ದುದರಿಂದ ಶ್ರೀ. ಈಶ್ವರಯ್ಯ ಜವಳಿಮಠ, ಇವರಿಗೆ ಅಧೀಕ್ಷಕ ಹುದ್ದೆಗೆ ಪದೋನ್ನತಿ ನೀಡುವ ಬಗ್ಗೆ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಸಲ್ಲಿಸಲು ಪ್ರಾಚಾರ್ಯರು ಆಯುರ್ವೇದ ವೈದ್ಯ ಮಹಾವಿದ್ಯಾಲಯ, ಬಿಜಾಪುರ ಇವರಿಗೆ ಪತ್ರ ಬರೆಯಲಾಗಿದೆ ಎಂದು ತಿಳಿಸಿರುತ್ತಾರೆ. ಈ ಪತ್ರವನ್ನು ನಿರ್ದೇಶಕರ ಹುದ್ದೆಯ ಪ್ರಭಾರದಲ್ಲಿ ಇದ್ದಂತಹ ಸಂಧರ್ಭದಲ್ಲಿ ಸೂಚನೆ ನೀಡಿದ್ದರಿಂದ ನಿರ್ದೇಶಕರು ಕಛೇರಿಗೆ ವಾಪಸ್ಸಾದ ನಂತರ ಅವರ ಗಮನಕ್ಕೆ ತರುವ ಅವಕಾಶ ಬರಲಿಲ್ಲವೆಂದು ತಿಳಿಸಿದ್ದಾರೆ. ನ್ಯಾಯಾಲಯದ ಆದೇಶದ ಶೀಘ್ರ ಅನುಷ್ಠಾನದ ಸದುದ್ದೇಶದಿಂದ ಪತ್ರವನ್ನು ತಮ್ಮ ಮಟ್ಟದಲ್ಲಿಯೇ ಸಹಿ ಮಾಡಿ ಕಳುಹಿಸಲಾಗಿದೆಯೇ ಹೊರತು ಯಾವುದೇ ದುರುದ್ದೇಶದಿಂದಾಗಲಿ ಅಥವಾ ನಿರ್ದೇಶಕರಿಗೆ ತೊಂದರೆ ಕೊಡಬೇಕೆಂಬ ಉದ್ದೇಶದಿಂದಾಗಲಿ ಅವರ ಗಮನಕ್ಕೆ ತರಬಾರದೆಂಬ ಉದ್ದೇಶದಿಂದಾಗಲೀ ಪತ್ರವನ್ನು ಬರೆದಿರುವುದಿಲ್ಲವೆಂದು ತಿಳಿಸಿರುತ್ತಾರೆ. ಅಲ್ಲದೇ ನ್ಯಾಯಾಲಯದ ನಿಂದನಾ ಅರ್ಜಿ ಸಂಃ596/2007 ರನ್ನು ನ್ಯಾಯಾಲಯವು ದಿಃ07-11-07 ರಂದೇ ಕೈ ಬಿಟ್ಟಿರುವುದಾಗಿ ತಿಳಿಸುತ್ತಾ ಹಾಗೂ ತಾವು ಈ ಹುದ್ದೆಯಿಂದ ದಿಃ25-07-07 ರಂದು ವರ್ಗಾವಣೆ ಹೊಂದಿರುವುದರಿಂದ ತಮ್ಮ ಮೇಲೆ ಹೊರಿಸಲಾದ ಆರೋಪದಿಂದ ದೋಷಮುಕ್ತರನ್ನಾಗಿಸಲು ಕೋರಿರುತ್ತಾರೆ.

ಶ್ರೀ. ಸಿ.ಹೆಚ್. ಪ್ರಭುದೇವ್, ಕೆ.ಎ.ಎಸ್ (ಹಿ.ಶ್ರೇ) ರವರು ನೀಡಿರುವ ಉತ್ತರವನ್ನು ದಾಖಲೆಗಳೊಂದಿಗೆ ಪರಿಶೀಲಿಸಿ ಆರೋಪಿತ ಅಧಿಕಾರಿಗಳು ನೀಡಿರುವ ಉತ್ತರಗಳು ಸಮಂಜಸವೆಂದು ಕಂಡು ಬಂದಿರುವ ಹಿನ್ನಲೆಯಲ್ಲಿ, ಹಾಗೂ ಉಚ್ಚ ನ್ಯಾಯಾಲಯವು ಪ್ರಶ್ನಿತ ನಿಂದನಾ ಅರ್ಜಿಯನ್ನು ಕೈಬಿಟ್ಟಿರುವುದರಿಂದ ಹಾಗೂ ಇದರಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗದೇ ಇರುವುದರಿಂದ ಇವರ ಉತ್ತರವನ್ನು ಒಪ್ಪಿ, ಇವರನ್ನು ಆರೋಪಗಳಿಂದ ಮುಕ್ತರನ್ನಾಗಿಸಲು ಸರ್ಕಾರವು ತೀರ್ಮಾನಿಸಿದೆ. ಆದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆಃ ಸಿಅಸುಇ 323 ಕೇಇವಿ 2007, ಬೆಂಗಳೂರು ದಿನಾಂಕಃ 18ನೇ ಜುಲೈ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಶ್ರೀ. ಸಿ.ಹೆಚ್. ಪ್ರಭುದೇವ್ ಕೆ.ಎ.ಎಸ್. (ಹಿ.ಶ್ರೆ) ಅಧಿಕಾರಿ ರವರನ್ನು ದಿಃ 06-06-2008ರ ನೋಟೀಸಿನಲ್ಲಿ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸುತ್ತದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಅರ್.1108

**ಎಚ್ ಆರ್ ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು-2)

**ವಿಷಯಃ** ಶ್ರೀ ಹೆಚ್. ಉಮೇಶ್ ಶೆಟ್ಟಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾದೀಶರು ಹಾಗೂ ವಿಚಾರಣಾಧಿಕಾರಿಗಳು-ಇವರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಒದಲಾಗಿದೆಃ**

1. ಸರ್ಕಾರಿ ಆದೇಶ ಸಂಃ ಸಿಅಸುಇ 141 ಎಸ್ಇಎನ್ 05 ದಿಃ04.04.2007.
2. ಶ್ರೀ. ಹೆಚ್.ಉಮೇಶ್ ಶೆಟ್ಟಿ ನಿವೃತ ಜಿಲ್ಲಾ ಸೆಷನ್ಸ್ ನ್ಯಾಯಾಧೀಶರು ಇವರ ವಿಚಾರಣಾ ವರದಿ ದಿನಾಂಕಃ 07-07-07.
3. ವಿಚಾರಣಾಧಿಕಾರಿ ರವರ ಮನವಿ ದಿಃ31-12-07 ಮತ್ತು 21-07-08.

**ಪ್ರಸ್ತಾವನೆಃ**

ಮೇಲೆ ಕ್ರಮ ಸಂ (1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಜೆ.ಆರ್. ಲೋಬೋ ಕೆ.ಎ.ಎಸ್ (ಹಿ.ಶ್ರೇ) ಅಧಿಕಾರಿ ರವರು ಮಂಗಳೂರು ಮಹಾನಗರಪಾಲಿಕೆ ಆಯುಕ್ತರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಸರ್ಕಾರದ ಮಂಜೂರಾತಿಯನ್ನು ಪಡೆಯದೇ ಮಂಗಳೂರು ಮಹಾನಗರಪಾಲಿಕೆಯ 64 ಮಂದಿ ಬದಲಿ ಪೌರ ಕಾರ್ಮಿಕರನ್ನು ಖಾಯಂಗೊಳಿಸಿ, ದಿಃ 01-05-2000ರ ಪೂರ್ವಾಹ್ನದಿಂದ ಜಾರಿಗೆ ಬರುವಂತೆ ಅವರ ಸೇವೆಯನ್ನು ಸಕ್ರಮಗೊಳಿಸಿ 1999 ರ ವೇತನ ಶ್ರೇಣಿ ರೂಃ 2500-3850 ರಂತೆ ಮಂಜೂರು ಮಾಡಿ ಆದೇಶ ಹೊರಡಿಸಿ ಸರ್ಕಾರದ ಆದೇಶ ಸಂಃ ನಅಇ 31 ಎಂಎನ್ಇ 98 ದಿಃ 21-08-95ರ ಸೂಚನೆಗಳನ್ನು ಉಲ್ಲಂಘಿಸಿರುವ ಹಾಗೂ ಮುಷ್ಕರದ ಸಮಯದಲ್ಲಿ ಬೇಡಿಕೆಗಳ ಬಗ್ಗೆ ಪರಿಶೀಲಿಸಿ ಕ್ರಮಕೈಗೊಳ್ಳುವಂತೆ ಸರ್ಕಾರದ ಪತ್ರ ಸಂಃ ನಅಇ 45 ಎಂಎಂಸಿ 2000 ದಿಃ 23-06-2000 ಮತ್ತು ಅದೇ ಸಂಖ್ಯೆಯ ದಿಃ 07-07-2000ರ ಪತ್ರಗಳಲ್ಲಿ ನಿರ್ದೇಶಿಸಲಾಗಿದ್ದರೂ ಸಹ ನೌಕರರನ್ನು ಸಕ್ರಮೀಕರಣಗೊಳಿಸುವ ಬಗ್ಗೆ ಸರ್ಕಾರದ ಗಮನಕ್ಕೆ ತರದೇ ಬದಲಿ ಪೌರ ಕಾರ್ಮಿಕರ ಸಕ್ರಮೀಕರಣವನ್ನು ಸರ್ಕಾರದ ಆದೇಶದನ್ವಯ ಮಾಡದೇ ಹಾಗೂ ಸರ್ಕಾರದ ಆದೇಶ ಪಡೆಯಲು ಸೂಕ್ತ ಕ್ರಮ ಕೈಗೊಳ್ಳದೇ ಕರ್ತವ್ಯಚ್ಯುತಿ ಎಸಗಿ ಸರ್ಕಾರದ ಸ್ಥಾಯಿ ಆದೇಶಗಳನ್ನು ಉಲ್ಲಂಘಿಸಿರುವ ಆರೋಪಗಳ ಕುರಿತು ವಿಚಾರಣೆ ನಡೆಸಲು ಶ್ರೀ. ಉಮೇಶ್ ಶೆಟ್ಟಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಈ ಪ್ರಕರಣದಲ್ಲಿ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ ಓದಲಾದ ಕ್ರಮ ಸಂ (2) ರಲ್ಲಿ ವಿಚಾರಣೆ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂ (3)ರಲ್ಲಿ ಓದಲಾದ ಮನವಿಯಲ್ಲಿ ವಿಚಾರಣಾಧಿಕಾರಿಯವರು ವಿಚಾರಣೆಯನ್ನು ನಡೆಸಿರುವ ಸಂಬಂಧ ಗೌರವಧನ ಹಾಗೂ ಪ್ರಯಾಣ ಭತ್ಯೆ ಮಂಜೂರು ಮಾಡುವಂತೆ ಕೋರಿರುತ್ತಾರೆ. ಅದರಂತೆ ಈ ಆದೇಶಃ

**ಸರ್ಕಾರಿ ಆದೇಶ ಸಂಃ ಸಿಅಸುಇ 141 ಎಸ್ಇಎನ್ 05 ಬೆಂಗಳೂರು, ದಿನಾಂಕಃ 01ನೇ ಸೆಪ್ಟೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಶ್ರೀ. ಉಮೇಶ್ ಶೆಟ್ಟಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು,ಮಂಗಳೂರು ಇವರಿಗೆ ಇಲಾಖಾ ವಿಚಾರಣೆ ನಡೆಸಿ,ವಿಚಾರಣಾ ವರದಿಯನ್ನು ಸಲ್ಲಿಸಿದ್ದಕ್ಕಾಗಿ ಸರ್ಕಾರಿ ಆದೇಶ ಸಂಃ ಸಿಅಸುಇ 16 ಸೇಇವಿ 05 ದಿಃ 23-08-05 ರನ್ವಯ ರೂಃ 6000.00(ಆರು ಸಾವಿರ ರೂಪಾಯಿಗಳು ಮಾತ್ರ) ಗೌರವಧನವನ್ನು ಹಾಗೂ ಸರ್ಕಾರಿ ಆದೇಶ ಸಂಃ ಸಿಅಸುಇ 45 ಸೇಇವಿ 01 ದಿಃ 04-03-02 ರನ್ವಯ ರೂಃ 1000.00 (ಒಂದು ಸಾವಿರ ರೂಪಾಯಿಗಳು ಮಾತ್ರ) ಗಳ ಪ್ರಯಾಣ ಭತ್ಯೆಯನ್ನು ಪಾವತಿಸಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಅಯವ್ಯಯ ಲೆಕ್ಕ ಶೀರ್ಷಿಕೆ 2052-ಸಚಿವಾಲಯ-ಸಾಮಾನ್ಯ ಸೇವೆಗಳು-090-ಸಚಿವಾಲಯ-01,ಕರ್ನಾಟಕ ಸರ್ಕಾರ ಸಚಿವಾಲಯ-051-ಸಾಮಾನ್ಯ ವೆಚ್ಚಗಳು ರಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಅರ್. 1278

**ಎಚ್ ಆರ್ ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು-2)

## COMMERCE AND INDUSTRIES SECRETARIAT

**Sub :** Permission to M/s. Gulbarga Cement Limited., to establish a "3.5 Million TPA Cement Plant with 100 MW Thermal Power Plant", at Ferozabad, Kirani, Somnathahalli Villages, in Gulbarga Taluk & District.

**Read :** Proceedings of the 14th State High Level Clearance Committee (SHLCC) meeting held on 17-3-2008.

**Preamble:**

M/s. Gulbarga Cement Limited., has proposed to establish a "3.5 Million TPA Cement Plant with 100 MW Thermal Power Plant", in 2475 acres of land, for the project i.e; 400 acres for factory and 2075 acres for mining (lime stone) at various Sy. Nos. as per annexure, of Ferozabad, Kirani, Somnathahalli Villages, in Gulbarga Taluk & District, with an investment of Rs. 1100.00 crores. The project envisages employment for 1500-2000 persons. The Company has requested for approval of the project and sanction of various infrastructure facilities as well as incentives and concessions.

The State High Level Clearance Committee (SHLCC), after detailed discussion of the project proposal of the said Company, approved the proposal of M/s. Gulbarga Cement Limited and decided to grant infrasctur e facilities and extend incentives and concessions. Hence, the following order.

**Government Order No. CI 79 SPI 2008, Bangalore, Dated 3rd May 2008**

In the circumstances explained above, Government is pleased to approve the project proposal of M/s. Gulbarga Cement Limited., to establish a "3.5 Million TPA Cement Plant with 100 MW Thermal Power Plant", in 2475 acres of land, for the project i.e; 400 acres for factory and 2075 acres for mining (lime stone) at various Sy. Nos. of Ferozabad, Kirani, Somnathahalli Villages, in Gulbarga Taluk & District, as in the annexure, with an investment of Rs. 1100.00 crores and extend the following infrastructure facilities, incentives and concessions.

**INFRASTRUCTURE FACILITIES:**

**Land:** KIADB to acquire and allot 2475 acres of land on consent at various Sy. Nos. as in the annexure, in Ferozabad, Kirani, Somnathahalli Villages, Gulbarga Taluk and District.

The company shall obtain & furnish consent of the land owners for minimum 70% of total extent of land to KIADB before commencement of acquisition.

The company shall consider the appropriate R & R package as per R & R policy of Government of India.

**Power:** 50 MW to be met out from 100 MW Captive Power Plant.

**Water:** WRD to permit the company to draw 5.5 MLD of water from downstream of existing barrage of Bhima River. The company to construct an exclusive barrage downstream of existing barrage, to tap water from Bhima River at its own cost. The company shall adopt rainwater harvesting and water recycling.

**Incentives and Concessions:** As per New Industrial Policy 2006-2011.

**Environment:** KSPCB to issue CFE as per their norms. The company shall obtain Environmental Clearance from MOEF, Government of India. No civil works shall commence prior to obtaining ECC.

**Employment :** The project proponents shall provide employment for atleast one member of the family of each land loser. The Company shall prepare a plan for development of human resources required for the project, train local people and provide employment to these trained local youth and comply with Government policy of Employment to local people i.e., Dr. Sarojini Mahishi report. A copy of human resources development plan shall be sent to the Commissioner for I.D. & Director of Industries and Commerce for monitoring.

**Vendor Development :** Where ever there is scope for vendor development for the project, the company shall prepare a vendor development plan develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.

**Social Infrastructure Development :** The Company is advised to take up social infrastructure development projects in the vicinity of the proposed location of the unit. A copy of such projects shall be sent to the Government.

**Others:**

1. The promoter shall take all statutory and other necessary clearances and shall submit milestones/ progress in implementation of the project regularly, which will be monitored by the Departments concerned.
2. Wherever acquisition through KIADB is proposed, the project proponents shall provide employment for at least one member of the family of each land loser.
3. In projects which envisage a housing component, the promoters shall reserve 20% of residential built-up area of the project for economically weaker sections (LIG)
4. The project proponents shall provide a map indicating the road connectivity and a note on the anticipated circulation pattern, traffic management, etc. KUM shall share this with the PWD and the Police Dept. The project proponents shall agree to part with land free of cost for any road widening/ traffic mitigation measures that may be suggested by PWD/ Police Dept.
5. In all cases where significant employment is to be created under the proposed project, KUM shall forward the manpower needs to the Depts. Of Employment & Training and C & I and ensure that skill development programmes are taken up in the catchment area of the project. Project proponents shall also play a proactive role in enhancing the employability of the local job seekers, including the land losers.

This approval is valid for a period of two years from the date of issue.

By order and in the name of the President of India,

**B.R. NAGABHUSHANA**

Desk Officer (Technical Cell)

Commerce & Industries Department.

**Annexure to Government Order No. CI 79 SPI 2008, dt: 3-5-2008**

Village extent details of proposed mining lease area

| Village | Extent |
|---|---|
| Ferozabad | 1593.52 |
| Naddi Sinnur | 173.99 |
| Somanath halli | 98.47 |
| Krani | 580.03 |
| **Total Extent** | **2446.01 Acres or 989.89 Hectars or 9.89 Sq.Kms.** |

**B.R. NAGABHUSHANA**

Desk Officer (Technical Cell)

Commerce & Industries Department.

**CHARBAL FERTILISERS AND CHEMICALS LIMITED**

**VILLAGE EXTENT DETAILS OF PROPOSED MINING LEASE AREA**

**VILLAGE-FEROZABAD**

| Sl. No. | Survey No. | Extent (in crores) | Sl. No. | Survey No. | Extent (in crores) |
|---|---|---|---|---|---|
| | | | | List Coim. Tol | 489.47 |
| 1 | 2 | 3 | 4 | 5 | 6 |
| 1 | 142.00 | 27.12 | 51 | 171/AA | 8.00 |
| 2 | 143.00 | 21.05 | 52 | 171/1 | 8.00 |
| 3 | 144.00 | 37.37 | 53 | 172.00 | 20.31 |

